# ಮಂಡ್ಯ ತಾಲ್ಲೂಕಿನ ಶಾಸನೋಕ್ತ ದೇವಾಲಯಗಳ

## ಒಂದು ಅಧ್ಯಯನ

(ಇತಿಹಾಸ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)

ಸಂಶೋಧಕ :
ಶ್ರೀಮತಿ ಮಮತಾರಾಣಿ
REG. NO.KARSMH 00374

ಮಾರ್ಗದರ್ಶಕರು :
ಶ್ರೀ ಎನ್. ಮಹದೇವಸ್ವಾಮಿ



ಕರ್ನಾಟಕ ಸಂಘ (ರಿ.), ಮಂಡ್ಯ
ಪ್ರೊ. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ. ವಿ. ಹಂಪಿ ಮಾನ್ಯತೆ ಪಡೆದಿದೆ)
2008-09

# ಮಂಡ್ಯ ತಾಲ್ಲೂಕಿನ ಶಾಸನೋಕ್ತ ದೇವಾಲಯಗಳ

## ಒಂದು ಅಧ್ಯಯನ



(ಇತಿಹಾಸ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)



ಸಂಶೋಧಕ :
ಶ್ರೀಮತಿ ಮಮತಾರಾಣಿ
**REG. NO.KARSMH 00374**

ಮಾರ್ಗದರ್ಶಕರು :
ಶ್ರೀ ಎನ್. ಮಹದೇವಸ್ವಾಮಿ



ಕರ್ನಾಟಕ ಸಂಘ [ರಿ.], ಮಂಡ್ಯ
**ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**
[ಕನ್ನಡ ವಿ. ವಿ. ಹಂಪಿ ಮಾನ್ಯತೆ ಪಡೆದಿದೆ]
2008–09

# ಮಾರ್ಗದರ್ಶಕರ ಪ್ರಮಾಣ ಪತ್ರ

"ಮಂಡ್ಯ ತಾಲ್ಲೂಕಿನ ಶಾಸನೋಕ್ತ ದೇವಾಲಯಗಳು- ಒಂದು ಅಧ್ಯಯನ" ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ. ಫಿಲ್. ಪದವಿಗಾಗಿ ಶ್ರೀಮತಿ ಮಮತಾರಾಣಿ ರವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

29/09/2009

ಸ್ಥಳ :
ದಿನಾಂಕ :

ಶ್ರೀ ಎನ್. ಮಹದೇವಸ್ವಾಮಿ.ಎಂ.ಎ.ಎಲ್.ಎಲ್.ಬಿ.,
ಪ್ರಾಧ್ಯಾಪಕರು
ಜೆಎಸ್‌ಎಸ್ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜು
ನಂಜನಗೂಡು.

# ಸಂಶೋಧಕನ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2008-09ನೇ ಸಾಲಿಗೆ ಇತಿಹಾಸ ಎಂ.ಫಿಲ್., ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು ''ಮಂಡ್ಯ ತಾಲ್ಲೂಕಿನ ಶಾಸನೋಕ್ತ ದೇವಾಲಯಗಳು- ಒಂದು ಅಧ್ಯಯನ'' ವಿಷಯವನ್ನು ಆಯ್ಕೆ ಮಾಡಿಕೊಂಡು ಬಿನೆಮಹದೇವಸ್ವಾಮಿ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ ಮತ್ತು ಕನ್ನಡ ವಿಶ್ವವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತೇನೆ.

MRani

(ಮಮತಾರಾಣಿ)
ಸಂಶೋಧಕ, ಚರಿತ್ರೆ ವಿಭಾಗ
ಕರ್ನಾಟಕ ಸಂಘ (ರಿ.), ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ-ಮಾನ್ಯತೆ ಪಡೆದಿದೆ)

ದಿನಾಂಕ: 29/09/-09
ಸ್ಥಳ : ಮಂಡ್ಯ

# "ಮಂಡ್ಯ ತಾಲ್ಲೂಕಿನ ಶಾಸನೋಕ್ತ ದೇವಾಲಯಗಳು"

## ಒಂದು ಅಧ್ಯಯನ

## ಮಂಡ್ಯ ತಾಲ್ಲೋಕಿನ ಶಾಸನೋಕ್ತ ದೇವಾಲಯಗಳು

## ಒಂದು ಅಧ್ಯಾಯನ

## ವಿಷಯಕ್ರಮ

# ಅಧ್ಯಯ - 1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಮತ್ತು ಪ್ರಾಮುಖ್ಯತೆ.

## ಪೀಠಿಕೆ

ಇತಿಹಾಸವು ಅನಾದಿಕಾಲದಿಂದಲೂ ನಿರಂತರವಾಗಿ ಸಾಗುತ್ತಿರುವ ಮಾನವ ಕೋಟಿಯ ನಾಗರೀಕತೆಯ ಜೀವಂತವಾಹಿನಿಯಾಗಿದೆ. ಅದು ಮಾನವ ಕುಲದ ಏಳು-ಬೀಳುಗಳ ಚಿಂತನೆ ಮಂಥನಗಳ ಜ್ವಲಂತ ಸಾಕ್ಷಿ ಇತಿಹಾಸ ಶಾಸ್ತ್ರವು ಮಾನವ ಸಮಾಜದ ಅತಿ ಪ್ರಮುಖವಾದ ಸಿದ್ಧಿ ಸಾಧನೆಗಳ ಅಧ್ಯಾಯನ ವಸ್ತು ಹೀಗಾಗಿ ಇತಿಹಾಸವು ಗತಕಾಲ, ವರ್ತಮಾನ ಮತ್ತು ಭವಿಷ್ಯ ಕಾಲದ ಸಂವಾದವೆನಿಸುತ್ತದೆ. ಗತಕಾಲದ ಅರಿವು ಮತ್ತು ಅನುಭವಗಳು ವರ್ತಮಾನ ಮತ್ತು ಭವಿಷ್ಯ ಕಾಲಗಳ ವಿಭಿನ್ನ ಸಮಸ್ಯೆಗಳ ಸ್ವರೂಪವನ್ನರಿಯಲು ಅವಶ್ಯಕ.

ಕರ್ನಾಟಕವು ದಖನ್ ಪ್ರಸ್ಥ ಭೂಮಿಯ ಪಶ್ಚಿಮ ಭಾಗದ ಬಹುಭಾಗವನ್ನೊಳಗೊಂಡಿದೆ. ಕರ್ನಾಟಕದಲ್ಲಿ ಗಂಗರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರು, ಉಮ್ಮತೂರಿನ ಪಾಳೆಗಾರರು, ಆಳ್ವಿಕೆ ನಡೆಸಿದ್ದಾರೆ. ನಾಡಿನ ಸಾಂಸ್ಕೃತಿಕ ಏಳಿಗೆಗೆ ಕಾರಣರಾಗಿದ್ದಾರೆ. ಈ ಅಂಶವು ಅವರು ಬಿಟ್ಟು ಹೋಗಿರುವ ಇತಿಹಾಸದ ಕುರುಹುಗಳಾದ ಸ್ಮಾರಕಗಳು, ಅಚ್ಚು ಹಾಕಿಸಿದ ನಾಣ್ಯಗಳು ಕಟ್ಟಿಸಿದ ದೇವಾಲಯಗಳು ಸಾಕ್ಷಿಯಾಗಿ ನಿಂತಿವೆ. ಅದಕ್ಕಿಂತ ಹೆಚ್ಚಾಗಿ ಅವರ ಕಾಲಾವಧಿಯಲ್ಲಿ ಕೆತ್ತಿಸಿದ ಸುಮಾರು 8869 ಶಾಸನಗಳು ದೊರೆತಿವೆ. ಮಂಡ್ಯ ತಾಲ್ಲೋಕಿನಲ್ಲೇ 87 ಶಾಸನಗಳಿವೆ. ಈ ಶಾಸನಗಳ ಅಧ್ಯಾಯನದಿಂದ ಪ್ರಾಚೀನ ಇತಿಹಾಸವನ್ನು ಅರಿಯಬಹುದು.

**ಅಧ್ಯಾಯನದ ಉದ್ದೇಶ:** ಮಂಡ್ಯ ತಾಲ್ಲೂಕಿನಲ್ಲಿ ಹಲವಾರು ದೇವಾಲಯಗಳಿದ್ದು, ಈ ದೇವಾಲಗಳು ಜೈನ, ಶೈವ, ವೈಷ್ಣವ ಧರ್ಮಗಳಿಗೆ ಸೇರಿದ್ದಾಗಿದ್ದು, ದೇವಾಲಯಗಳನ್ನು ನಿರ್ಮಿಸಿದ್ದರ ಸಂಬಂಧ ಹೊರಡಿಸಿದ ಶಾಸನಗಳನ್ನು ಬಳಸಿಕೊಂಡು ನನ್ನ ಅಧ್ಯಯನವನ್ನು ವಿಭಿನ್ನ ದೃಷ್ಠಿಕೋನದಿಂದ

ಅಂದರೆ ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ಹಿನ್ನಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಿ ದೇವಾಲಯಗಳ ರಚನೆಯ ಹಿನ್ನಲೆ ವಿಭಿನ್ನ ಧಾರ್ಮಿಕ ನೆಲಗಟ್ಟು ,ದೇವಾಲಯಗಳಿಗೆ ದೇವಾಲಯಗಳಿಗೆ ನೀಡಿದ ದಾನ ದತ್ತಿ ಹಾಗೂ ಜನಸಾಮಾನ್ಯರ ಧಾರ್ಮಿಕ ಭಾವನೆ ಮುಂತಾದ ವಿಷಯಗಳನ್ನು ವಿಶ್ಲೇಷಣೆಗೆ ಒಳಪಡಿಸಿ ನಿಬಂಧವನ್ನು ರಚಿಸುವ ಉದ್ದೇಶ ನನ್ನದಾಗಿದೆ. ಒಂದು ದೇಶದ ಇತಿಹಾಸ ರಚನೆಯಲ್ಲಿ ಸ್ಥಳೀಯ ಇತಿಹಾಸ ಅಥವಾ ಸ್ಥಳೀಯ ಸಂಸ್ಕೃತಿಯು ಬಹಳ ಮುಖ್ಯವಾದ ಪಾತ್ರವನ್ನು ವಹಿಸಿ ಸಾಂಸ್ಕೃತಿಕ ಸ್ಥಿತ್ಯಂತರ ಹಾಗೂ ನಿರ್ವಹಣೆಗೆ ಕಾರಣವಾಗಿದೆ. ಭಾರತದ ಪ್ರತಿಯೊಂದು ರಾಜ್ಯದಲ್ಲಿ ವಿಭಿನ್ನವಾದ ಸಂಸ್ಕೃತಿ ಇದ್ದು ಪ್ರತಿಯೊಂದು ರಾಜ್ಯದಲ್ಲಿ ಸಾಂಸ್ಕೃತಿಕ ವಿಭಿನ್ನತೆಯು ಹೆಚ್ಚು ಕಂಡುಬರುತ್ತದೆ. ಈ ಹಿನ್ನಲೆಯಲ್ಲಿ ಮಂಡ್ಯ ತಾಲ್ಲೂಕಿನ ಇತಿಹಾಸ ಮತ್ತು ಸಂಸ್ಕೃತಿಯನ್ನು ವಿಭಿನ್ನವಾಗಿ ಹಾಗೂ ಸ್ಥಳೀಯ ಹಿನ್ನಲೆಯಲ್ಲಿ ಅಧ್ಯಯನ ಮಾಡುವುದಷ್ಟೇ ಅಲ್ಲದೇ ಧಾರ್ಮಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಹೇಗೆ ಭಿನ್ನ ಸಾಂಸ್ಕೃತಿಕ ನೆಲೆಗಟ್ಟಿದೆ ಎಂಬುದನ್ನು ಹಾಗೂ ದೇವಾಲಯಗಳ ನಿರ್ಮಾಣದ ಇತಿಹಾಸ, ದಾನ ದತ್ತಿಗಳ ಮಹತ್ವನ್ನು ಶಾಸನಗಳನ್ನು ಅವುಗಳ ಆಧಾರದ ಮೇಲೆ ಸಂಶೋದನಾ ನಿಬಂದನೆಯನ್ನು ರಚಿಸುವುದು ನನ್ನ ಅಧ್ಯಯನದ ಉದ್ದೇಶವಾಗಿದೆ.

<u>ವ್ಯಾಪ್ತಿ :</u> ನನ್ನ ಅಧ್ಯಯನದ ವ್ಯಾಪ್ತಿಯು ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕಿನ ಶಾಸನೋಕ್ತ ದೇವಾಲಯಗಳಿಗೆ ಮಾತ್ರ ಸೀಮಿತವಾಗಿದ್ದು, ಶಾಸನೋಕ್ತ ದೇವಾಲಯಗಳನ್ನು ಸೂಕ್ಷ್ಮ ವಿಶ್ಲೇಷಣೆಗೆ ಒಳಪಡಿಸಿ ಧಾರ್ಮಿಕ ಸಾಂಸ್ಕೃತಿಕ ದೇವಾಲಯಗಳ ನಿರ್ಮಾಣದ ಸನ್ನಿವೇಶ, ದೇವಾಲಯಗಳಿಗೆ ನೀಡಿದ ದಾನ ದತ್ತಿಗಳು, ಆಳರಸರು ಕೈಗೊಂಡ ಜೀರ್ಣೋದ್ಧಾರ ಕಾರ್ಯ ಹಾಗೂ ಧಾರ್ಮಿಕ ಸಮುದಾಯದ ವೈವಿಧ್ಯತೆ ಅಥವಾ ಧಾರ್ಮಿಕ ಸಹಿಷ್ಣುತೆ ಎಂಬ ವಿಚಾರದ ಬಗ್ಗೆ ಅಧ್ಯಯನ ಮಾಡುವುದಾಗಿದೆ.

<u>ವಿಧಾನ :</u> ನಾನು ನನ್ನ ಅಧ್ಯಾಯನ ಕೈಗೊಳ್ಳಲು ಮೂರು ಅಧ್ಯಾಯನ ವಿಧಾನವನ್ನು ಬಳಸೊಂಡಿದ್ದೇನೆ ಮಾದಲಿಗೆ ಪರಮರ್ಶನ ಗ್ರಂಥ ಶಾಸನಗಳ ಸ್ಥೂಲ ವಿವರಗಳಿರುವ ಆಕರಗಳನ್ನು ಅಧ್ಯಾಯನ ಮಾಡಿ ಅದರಲ್ಲಿ ತಾಲ್ಲೋಕಿನ ಶಾಸನಗಳ ಪಟ್ಟಿಯನ್ನು ಪಡೆದು ಶಾಸನಗಳಲ್ಲಿರುವ ಮಾಹಿತಿ ಪಡೆಯಲಾಯಿತು.

PTO

ನಂತರ ಎರಡನೇ ವಿಧಾನ ಕ್ಷೇತ್ರಕಾರ್ಯ ನಡೆಸಿ ದೇವಾಲಯಗಳು ಮತ್ತು ಶಾಸನಗಳಿರುವ ಪ್ರದೇಶಗಳನ್ನು ಪರಶೀಲಿಸಿ ದೇವಾಲಯಗಳ ವಾಸ್ತು ರಚನೆಯನ್ನು ತಿಳಿದುಕೊಳ್ಳಲಾಯಿತು. ಮೂರನೇಯದಾಗಿ ಕ್ಷೇತ್ರಕಾರ್ಯದ ಜೊತೆ ಜೊತೆಗೆ ಸ್ಥಳೀಯರ, ಮೌಖಿಕ ವಿಧಾನ ಅನುಸರಿಸಿ ನಂತರ ದ್ವಿತೀಯ ಆಗರಗಳ ಪರಾಮರ್ಶನ ಗ್ರಂಥಗಳಿಂದ ಮಾಹಿತಿ ಪಡೆದು ಅಧ್ಯಾಯನ ಮಾಡಿದೆ.

ಅಧ್ಯಾಯನ ವಿಂಗಡಣೆ

ಆಕರೆಗಳ ಸಂಗ್ರಹಣೆ

ವಿಂಗಡಣೆ

ವಿಶ್ಲೇಷಣೆ

ನಿರೂಪಣೆ

ಮೊದಲನೆಯದಾಗಿ ಆಕರಗಳನ್ನು ಸಂಗ್ರಹಣೆ ಮಾಡಲಾಯಿತು. ತಾಲ್ಲೋಕಿನ ಶಾಸನಗಳು, ದೇವಾಲಯಗಳ ಭೇಟಿ ಅಲ್ಲಿಯ ಸ್ಥಳೀಯ ಮೌಖಿಕ ವಿವರಗಳ ಸಂಗ್ರಹಣೆ ಶಾಸನಗಳ ಸಂಪುಟ ಹಾಗೂ ತಾಲ್ಲೋಕಿನ ದೇವಾಲಯದ ಬಗ್ಗೆ ಬರೆದಿರುವಂತಹ ಲೇಖಕರ ಗ್ರಂಥಗಳು ಪ್ರಥಮ ಮತ್ತು ದ್ವಿತೀಯ ಆಧಾರಗಳನ್ನು ಮೊದಲ ಹಂತದಲ್ಲಿ ಮಾಡಲಾಯಿತು. ಎರಡನೇಯ ಹಂತದಲ್ಲಿ ಅವುಗಳನ್ನು ವಿಂಗಡಿಸಿ ಮೂಲ ಆಧಾರಗಳನ್ನಿಟ್ಟುಕೊಂಡು ದ್ವಿತೀಯ ಆಧಾರಗಳನ್ನು ಬಳಸಿಕೊಳ್ಳಲಾಯಿತು ನಂತರ ವಿಶ್ಲೇಷಣೆ ಮಾಡಿ ನಿರೂಪಿಸಿದೆ. ನನ್ನ ವಿಷಯವಾದ ತಾಲ್ಲೋಕಿನ ಶಾಸನೋಕ್ತ ದೇವಾಲಯ ಎಂಬ ವಿಷಯವನ್ನು ನಾಲ್ಕು ಅದ್ಯಾಯಗಳಾಗಿ ವಿಂಗಡಿಸಿ ಬರೆಯಲಾಗಿದೆ.

ಮೊದಲನೆಯ ಅದ್ಯಾಯನದಲ್ಲಿ ಮಂಡ್ಯ ತಾಲ್ಲೋಕಿನ ಪ್ರಾಕೃತಿಕ ಹಿನ್ನಲೆ ರಾಜಕೀಯ ಚರಿತ್ರೆ ಮತ್ತು ಮಂಡ್ಯದ ಪೂರ್ವ ಇತಿಹಾಸವನ್ನು ತಿಳಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಶಾಸನಗಳ ಅರ್ಥ, ಲಕ್ಷಣ, ಪ್ರಕಾರಗಳು, ಶಾಸನ ಸಾಮಾಗ್ರಿಗಳು ಮತ್ತು ಶಾಸನದ ಮಹತ್ವವನ್ನು ತಿಳಿಸಿದ್ದೇನೆ. ಮೂರನೇ ಅಧ್ಯಾಯದಲ್ಲಿ ದೇವಾಲಯ ಎಂದರೇನು ಅದರ ಅರ್ಥ ಅದು ಬೆಳೆದು ಬಂದ ದಾರಿ ,ದೇವಾಲಯ ಯಾವ ಯಾವ ಕಾರ್ಯಗಳಿಗೆ ಬಳಸಲ್ಪಡುತ್ತಿತ್ತು. ದೇವಾಲಯಕ್ಕೆ ನೀಡುವ ದಾನದತ್ತಿಯ ವಿಚಾರ ಹಾಗೂ ದೇವಾಲಯ ಶೈಲಿಗಳನ್ನು ತಿಳಿಸಿದ್ದೇನೆ.

ನಾಲ್ಕನೇ ಅದ್ಯಾಯನದಲ್ಲಿ ಮಂಡ್ಯ ತಾಲ್ಲೂಕಿನಲ್ಲಿರುವ ಶಾಸನಗಳನ್ನು ವಿಶ್ಲೇಷಣೆ ಮಾಡಿ ನಿರೂಪಿಸಲಾಗಿದೆ.

## 1.1. ಪ್ರಾಕೃತಿಕ ಹಿನ್ನಲೆ

ಮಂಡ್ಯ ಜಿಲ್ಲೆಯ 76$^0$ .19 ಮತ್ತು 72$^0$.20 ಪೂರ್ವಕ್ಕೆ ರಾಖಾಂಶ ಮತ್ತು 12$^0$.13 ಮತ್ತು ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೋಖಿನಲ್ಲಿ ಮಂಡ್ಯ ಎಂಬ ಹೆಸರಿನ ಪಟ್ಟಣವೂ ಇದೆ. ಈ ತಾಲ್ಲೂಖು ಜಿಲ್ಲೆಯ ದಕ್ಷಿಣದ ಭಾಗದಲ್ಲಿದೆ. ದಕ್ಷಿಣ ದಲ್ಲಿ ಶ್ರೀರಂಗಪಟ್ಟಣ ತಿ. ನರಸೀಪುರ ಮತ್ತು ಮಳವಳ್ಳಿ ತಾಲ್ಲೂಕು, ಪೂರ್ವದಲ್ಲಿ ಮದ್ದೂರು ತಾಲ್ಲೂಖು, ಉತ್ತರದಲ್ಲಿ ನಾಗಮಂಗಲ ತಾಲ್ಲೂಕು ಮತ್ತು ಪಶ್ಚಿಮದಲ್ಲಿ ಪಾಂಡವಪುರ ತಾಲ್ಲೂಕುಗಳಿಂದ ಸುತ್ತುವರಿಯಲ್ಪಟ್ಟಿದೆ. ಈ ತಾಲ್ಲೂಕಿನಲ್ಲಿ ಒಟ್ಟು ಐದು ಹೋಬಳಿಗಳಿವೆ ಅವುಗಳು ಕೆರಗೋಡು, ಮಂಡ್ಯ, ಕೊತ್ತತ್ತಿ, ದುದ್ದ ಮತ್ತು ಬಸರಾಳು ತಾಲ್ಲೂಕಿನಲ್ಲಿರುವ ಒಟ್ಟು ಗ್ರಾಮಗಳ ಸಂಖ್ಯೆ 183, ತಾಲ್ಲೂಕಿನ ವಿಸ್ತೀರ್ಣ 7151 ಚ.ಕಿ.ಮೀ. ಜನಸಂಖ್ಯೆ 3,31,279 (1981 ಜನಗಣತಿಯಂತೆ)[1]

ಮಂಡ್ಯ ತಾಲ್ಲೂಕು ಸಾಮಾನ್ಯವಾಗಿ ಮೈದಾನ ಪ್ರದೇಶ ವಿಶೇಷವಾದ ಬೆಟ್ಟಗುಡ್ಡಗಳು ತಾಲ್ಲೂಕಿನಲ್ಲಿಲ್ಲ. ಲೋಕಪಾವನಿ ನದಿ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ಸ್ವಲ್ಪ ದೂರ ಹರಿದು ನಂತರ ತಾಲ್ಲೂಕಿನ ಅಂಚಿನಲ್ಲಿ ಪಾಂಡುವಪುರ ತಾಲ್ಲೂಕನ್ನು ಬೇರ್ಪಡಿಸುವ ಗಡಿಯಾಗಿ ದಕ್ಷಿಣಾಭಿಮುಖವಾಗಿ ಹರಿಯುವುದು. ಈ ತಾಲ್ಲೂಕಿನಲ್ಲಿ ಹೆಚ್ಚಾಗಿ ಮರಳು ಮಿಶ್ರಿತ ಕೆಂಪು ಜೇಡಿ ಮಣ್ಣಿನ ಭೂಮಿ ಇದೆ.

## 1.2 ಇತಿಹಾಸ ಪೂರ್ವಕಾಲ :

ಭೌಗೋಳಿಕವಾಗಿ ವಿವಿಧ ಪರಿಸರದಲ್ಲಿ ನೆಲೆಸಿರುವ ಮಾನವರು ತಮ್ಮದೇ ಆದ ವೈಶಿಷ್ಟ್ಯತೆಯನ್ನು ಹೊಂದಿದ್ದರು. ನದಿಯ ತೀರದಲ್ಲಿ ಲಭ್ಯವಿರುವ ಮೃದುವಾದ ಕಲ್ಲುಗಳು ಆದಿಮಾನವರಿಗೆ ಅವಶ್ಯಕವಾದ ಉಪಕರಣ ಸಾಧನಗಳಾಗಿದ್ದವು. ಹೀಗಾಗಿ ನದಿಯ ಕಣಿವೆಗಳಲ್ಲಿ ಪ್ರಾಗೈತಿಹಾಸಿಕ ನಿವೇಶನಗಳು ಅಧಿಕ ವಾಗಿ ಕಂಡು ಬಂದಿವೆ. ಕಳೆದ 19ನೇ ಶತಮಾನದ ಕಡೆಯಲ್ಲಿ ರಾಬರ್ಟ್

ಬ್ರೂಸ್‌ಫೂಟ್ ಈ ಪ್ರದೇಶದಲ್ಲಿ ಭೂಸರ್ವೇಕ್ಷಣಾ ಕಾರ್ಯ ಕೈಗೊಂಡು ನವಶಿಲಾಯುಗ ಮತ್ತು ಬೃಹತ್ ಶಿಲಾಯುಗಗಳ ಅವಶೇಷಗಳನ್ನು ಪತ್ತೆ ಹಚ್ಚಿದ್ದಾರೆ.

ಇಲ್ಲಿ ಸಾಕಷ್ಟು ಪ್ರಮಾಣದಲ್ಲಿ ಮಡಿಕೆ ಚೂರುಗಳು, ಬಳೆಯ ಚೂರುಗಳು, ಕವಡೆಗಳು ಮತ್ತಿತರ ಪ್ರಾಚೀನ ವಸ್ತುಗಳು ಈಗಲೂ ದೊರೆಯುತ್ತಿವೆ. ಈ ಪರಿಸರದಲ್ಲಿ ಕಂಡುಬರುವ ಅವಶೇಷಗಳು ಉತ್ತರ ಕರ್ನಾಟಕದ ನವಶಿಲಾಯುಗದ ಬೂದಿದಿಬ್ಬಗಳನ್ನು ಹೋಲುತ್ತವೆ. ಇಲ್ಲಿ ದೊರೆತ ಮಡಿಕೆ ಚೂರುಗಳು ನವಶಿಲಾಯುಗ, ಬೃಹತ್ ಶಿಲಾಯುಗ ಮತ್ತು ಇತಿಹಾಸ ಆರಂಭದ ಕಾಲಗಳಿಗೆ ಸೇರಿದಂತಹವುಗಳಾಗಿವೆ. ಇಲ್ಲಿ ದೊರೆತಿರುವ ಶಿಲಾಯುದಗಳೆಂದರೆ ಬಹುಪಾಲು ಕಲ್ಲಿನ ಕೊಡಲಿಗಳು ಮತ್ತು ಕೈಕತ್ತಿಗಳಾಗಿವೆ.

ಮಂಡ್ಯ ಜಿಲ್ಲೆಯ ಆಸುಪಾಸಿನ ಪರಿಸರದಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳು ಕಂಡುಬಂದಿರುವುದು ಈ ಪ್ರದೇಶದ ಪ್ರಾಚೀನತೆ ಹಾಗೂ ಪ್ರಾಗೈತಿಹಾಸಿಕ ಮಹತ್ವವನ್ನು ತಿಳಿಸುತ್ತದೆ. ಮಂಡ್ಯ ತಾಲ್ಲೂಕು ತೂಬಿನಕೆರೆಯ ಗುಡ್ಡದಲ್ಲಿ ಚಕ್ರವ್ಯೂಹದಂತಹ ಬಯಲು ಬಂಡೆರೇಖಾ ಚಿತ್ರವನ್ನು ಇತ್ತೀಚೆಗೆ ಪತ್ತೆ ಹಚ್ಚಲಾಗಿದೆ. ಹುಲಿವಾನದ ಕಾಲಭೈರವೇಶ್ವರನ ಜಾತ್ರೆಯಲ್ಲಿ ಪೂಜಿಸಲ್ಪಡುವ ಆಯುದಗಳಲ್ಲಿ ಕೆಲವು ಶಿಲಾಯುಗದ ಆಯುದಗಳನ್ನು ಹೋಲುತ್ತದೆ.

## ಪ್ರಾಕೃತಿಕ ಹಿನ್ನಲೆ :

ಜಿಲ್ಲಾ ಕೇಂದ್ರವಾಗಿರುವ ಇದು ರಾಜಧಾನಿ ಬೆಂಗಳೂರಿನಿಂದ 96 ಕಿ.ಮೀ. ದಕ್ಷಿಣಕ್ಕೆ ಬೆಂಗಳೂರು - ಮೈಸೂರು ರಾಜ್ಯ ಹೆದ್ದಾರಿಯಲ್ಲಿರುವ ಪ್ರಮುಖ ಪಟ್ಟಣ ನೆರೆಯ ಹೊಸಬೂದನೂರಿನ ಅನಂತಪದ್ಮನಾಭ ಗುಡಿಯಲ್ಲಿರುವ ಹೊಯ್ಸಳ ಮುಮ್ಮಡಿ ನರಸಿಂಹನ ಕಾಲಕ್ಕೆ ಸೇರಿದ ಕ್ರಿ.ಶ. 1276ರ ಶಾಸನದಲ್ಲಿ ಇದು ಅನಾದಿ ಅಗ್ರಹಾರ ಮಂಡೆಯ ಎಂದೇ ದಾಖಲಿಸಲ್ಪಟ್ಟಿದ್ದರೆ [2] ವಿಜಯನಗರದ ಅರಸ ಕೃಷ್ಣದೇವರಾಯನ ಕಾಲದ ಕ್ರಿ. ಶ. 1561ರ ಮಂಡ್ಯ ತಾಮ್ರ ಶಾಸನದಲ್ಲಿ 'ಅಗ್ರಹಾರ ಮಂಡೇಯ' ಹಾಗೂ 'ಚಿಕ್ಕಮಂಟೆಯ'ಗಳ ಪ್ರಸ್ತಾಪವಿದೆ.

- ಮಂಡ್ಯ ಸ್ಥಳನಾಮದ ಮೂಲ ರೂಪವು 'ಮಂಡೆಯ, ಮಂಲೆಯ' ಆಗಿದ್ದು, ಶ್ರೀ ವೈಷ್ಣವ ಬ್ರಾಹ್ಮಣರಿಗೆ ನೀಡಲ್ಪಟ್ಟಿದ್ದ ದತ್ತಿ ಅಗ್ರಹಾರವಾಗಿದ್ದು. ಪ್ರಮುಖ ವಿದ್ಯಾಕೇಂದ್ರವೂ ಆಗಿದ್ದ ಅಂಶ ವೇದ್ಯವಾಗುತ್ತದೆ.[3]

- ಇದರ ಪ್ರಾಚೀನತೆಯನ್ನು ಪೌರಾಣಿಕವಾಗಿ ಕೃತಯುಗದಷ್ಟು ಹಿಂದಿಕ್ಕೆ ಗುರುತಿಸಲಾಗುತ್ತದೆ. ಅದರಂತೆ ಕೃತಯುಗದಲ್ಲಿ ದಟ್ಟವಾದ ಅರಣ್ಯದಿಂ ದೊಡಗೂಡಿದ್ದ ಈ ಪ್ರದೇಶದಲ್ಲಿ ತಪಸ್ಸು ಮಾಡುತ್ತಿದ್ದ ಮಾಂಡವ್ಯ ಋಷಿಗಳು, ಪ್ರಾಣಿಗಳಿಗೂ ವೇದೋಪದೇಶ ನೀಡುತ್ತಿದ್ದುದರಿಂದ ಇದಕ್ಕೆ ವೇದಾರಣ್ಯ ಎಂಬ ಹೆಸರಿದ್ದು, ಮಾಂಡವ್ಯ ಮುನಿಗಳಿಂದಾಗಿ ಮುಂದೆ ಅದೇ 'ಮಂಡೆಯ' ಆಯಿತೆಂದೂ ಪ್ರತೀತಿ ಎಂದು ಹೇಳಲಾಗುತ್ತದೆ.ಇಲ್ಲಿಯ ಜನಾರ್ಧನನ ಪ್ರತಿಸ್ಥಾಪನೆ ಅವರದೆಂದೂ ಹೇಳಲಾಗುತ್ತದೆ.

- ಅದೇ ಯುಗದಲ್ಲಿ ಇದ್ದ ಇನ್ನೊಬ್ಬ ಋಷಿಗಳು ಇಲ ಲಿ ಸಕಲೇಶ್ವರ ಸ್ವಾಮಿ ಗುಡಿಯನ್ನು ಸ್ಥಾಪಿಸಿ. ವಿಷ್ಣು ದರ್ಶನ ಪಡೆದು ಈ ಸ್ಥಳಕ್ಕೆ ವಿಷ್ಣುಪುರ ಎಂದು ಹೆಸರಿಟ್ಟರೆಂದೂ ತಿಳಿದು ಬರುತ್ತದೆ.

- ಹಾಗೆಯೇ ಪುತ್ರ ಸಂತಾನವಿಲ್ಲದೆ ಕೊರಗುತ್ತಿದ್ದ ಇಂದ್ರವರ್ಮನೆಂಬ ರಾಜನು ದ್ವಾಪರ ಯುಗದಲ್ಲಿ ಇಲ್ಲಿಗೆ ಬಂದು ಜನಾರ್ಧನನನ್ನು ಆರಾಧಿಸಿ ಸೋಮವರ್ಮನೆಂಬ ಪುತ್ರನನ್ನು ಪಡೆದನಂತೆ. ಮುಂದೆ ಅವನೇ ಇಲ್ಲಿ ಕೋಟೆ ಕಟ್ಟಿ ಅಗ್ರಹಾರ ನಿರ್ಮಿಸಿ ಅದಕ್ಕೆ 'ಮಂಡವೇಮು' ಎಂದು ಹೆಸರಿಟ್ಟದ್ದು. ಕ್ರಮೇಣ ಅದೇ ಮಂಡ್ಯ ಆಯಿತೆಂಬ ಐತಿಹ್ಯವೂ ಇದೆ.

- ತಿರುಪತಿ ಬಳಿಯ 'ಮಂಡವೇಮು' ಗ್ರಾಮದವರು ಇಲ್ಲಿಗೆ ವಲಸೆ ಬಂದು ಊರು ಕಟ್ಟಿ ತಮ್ಮ ಹಳೇ ಊರ ಹೆಸರನ್ನೇ ಇದಕ್ಕೂ ಇಟ್ಟರೆಂಬ ಹೇಳಿಕೆಯೂ ಇದೆ.

- ರಾಗಿ ವ್ಯಾಪಾರಕ್ಕೆ ಹೆಸರಾದ ಮಂಡಿಯಿಂದ ಇಲ್ಲವೇ ಹೈನುಗಾರಿಕೆಗೆ ಅದರಲ್ಲೂ ವಿಶೇಷವಾಗಿ ಬೆಣ್ಣೆಗೆ ಹೆಸರಾಗಿದ್ದುದರಿಂದ ಈ ಸ್ಥಳಕ್ಕೆ 'ಮಂಡ್ಯ' ಎಂದು ಹೆಸರು ಬಂದಿತೆಂಬ ಅಭಿಪ್ರಾಯವೂ ಇದೆ.

## 1.3 ರಾಜಕೀಯ ಚರಿತ್ರೆ :

ಮಂಡ್ಯದಲ್ಲಿ ದೊರೆತಿರುವ ಅನೇಕ ಶಾಸನಗಳಿಂದ ಮಂಡ್ಯದ ರಾಜಕೀಯ ಚರಿತ್ರೆಯನ್ನು ಅರಿಯಬಹುದು. ಇಲ್ಲಿ ಆಳ್ವಿಕೆ ಮಾಡಿದ ಗಂಗರು, ಹೊಯ್ಸಳರು, ಚೋಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರು ಪಾಳೆಗಾರರು, ನಾಯಕರು ನೀಡಿದ ಭೂದಾನಗಳು ದತ್ತಿಗಳ ವಿವರಗಳನ್ನು ಶಾಸನಗಳಿಂದ ತಿಳಿಯಬಹುದು. ಮಂಡ್ಯ ತಾಲ್ಲೂಕು ಗಂಗರ ಕಾಲದಲ್ಲಿ ಆಡಳಿತದ ಒಂದು ಭಾಗವಾಗಿತ್ತು. ಗಂಗರ ಹಲವಾರು ಶಾಸನಗಳು ಮಂಡ್ಯ ತಾಲ್ಲೂಕಿನಲ್ಲಿ ದೊರೆತಿವೆ. ಇದರಿಂದ ಅವರ ರಾಜಕೀಯ ಇತಿಹಾಸ ತಿಳಿಯಬಹುದು.

ಗಂಗರ ಶಾಸನವೆಂದರೆ 1ನೇ ಶಿವಕುಮಾರ (ಕ್ರಿ.ಶ. 679-725), ಶ್ರೀಪುರುಷ (ಕ್ರಿ.ಶ. 725-783), ಸತ್ಯವಾಕ್ಯ ರಾಜಮಲ್ಲ-4 (ಕ್ರಿ.ಶ. 972), ಗಂಗ ಪೆರ್ಮಾನಡಿ (ಕ್ರಿ.ಶ. 997), ಸತ್ಯವಾಕ್ಯ (10-11ನೇ ಶತಮಾನ)[3]

ಮಂಡ್ಯ ತಾಲ್ಲೂಕಿನ ಹಲ್ಲೇಗೆರೆ ಶಾಸನವು ಆತನ ಆಳ್ವಿಕೆಯ ಕಾಲದ ಪ್ರಥಮ ದಾಖಲೆಯಾಗಿದ್ದು ಶಿವಕುಮಾರನು ಅಧಿಕಾರಕ್ಕೆ ಬಂದ ವರ್ಷವನ್ನು ಕರಾರುವಕ್ಕಾಗಿ ನಿರ್ಧರಿಸಲು ಸಹಾಯಕವಾಗುತ್ತದೆ. ಈ ಶಾಸನವು ಕ್ರಿ.ಶ. 713ರ ತಾಮ್ರಪಟವಾಗಿದ್ದು ಒಂದನೇ ಶಿವಮಾರನು ದುರ್ವಿನೀತನ ಆಳ್ವಿಕೆಯ ನೂರು ವರ್ಷಗಳ ನಂತರ ಪಟ್ಟಣಕ್ಕೆ ಬಂದುದರ ಬಗ್ಗೆ ಸ್ಪಷ್ಟವಾಗಿ ಉಲ್ಲೇಖಿಸುತ್ತದೆ. ಈ ಆಧಾರದ ಮೇಲೆ ದುರ್ವಿನೀತನ ಕಾಲವನ್ನು ಸುಮಾರು ಕ್ರಿ.ಶ. 529 ರಿಂದ 579 ಎಂದು ನಿರ್ಧರಿಸಲು ಸಾಧ್ಯವಾಗಿದೆ.[4]

ಹಲ್ಲೇಗೆರೆ ಶಾಸನದಲ್ಲಿ ಕೆರಗೋಡು ವಿಷಯದ ವ್ಯಾಪ್ತಿಯಲ್ಲಿದ್ದ ಕೆರಗೋಡನ್ನು ಒಳಗೊಂಡಂತೆ ಅದರ ಉತ್ತರಕ್ಕೆ ಅಸುಪಾಸಿನಲ್ಲಿದ್ದ ಕೇಳುಗೋಳು, ಬೆಳ್ಕೆರೆ ಮೊದಲಾದ ಗ್ರಾಮಗಳನ್ನು ಸಂಪರ್ಕಿಸುವ ಸೇತುವೆಯ ನಿರ್ಮಾಣದ ಬಗ್ಗೆ ದಾಖಲಿಸಲಾಗಿದೆ. ಇಮ್ಮಡಿ ಶಿವಕುಮಾರನ ಕಾಲಾವಧಿಯಲ್ಲಿ ಈತನ ರಾಷ್ಟ್ರಕೂಟರ ವಿರುದ್ಧ ಹೋರಾಡಬೇಕಾಯಿತು. ರಾಷ್ಟ್ರಕೂಟ ದೊರೆ ಧ್ರುವನು ಈತನನ್ನು ಮುದಗುಂದೂರು ಯುದ್ಧದಲ್ಲಿ ಪರಾಭವಗೊಳಿಸಿ ಸೆರೆ ಹಿಡಿದನು.

ಮಂಡ್ಯ ತಾಲ್ಲೂಕಿನ ಹಳೆಬೂದನೂರಿನ ಸುಮಾರು ಕ್ರಿ.ಶ. 975ರ ಶಾಸನದಲ್ಲಿ ಗಂಗರ ಸತ್ಯವಾಕ್ಯ ಗೋವಿಂದರ ಹಾಗೂ ರಕ್ಕಸಗಂಗರನ್ನು ಹೆಸರಿಸುತ್ತಾ ಸೋವರಾಸಿ ಭಟಾರರು ಬೂದನೂರಿನಲ್ಲಿ ನಿರ್ಮಿಸಿದ ಕೆರೆಯ ನಿರ್ವಹಣೆಗೆಂದು ಬೂದನೂರಿನ ಗೌಡರು ಭೂಮಿಯನ್ನು ದಾನಬಿಟ್ಟ ಅಂಶವನ್ನು ದಾಖಲಿಸಿದೆ.[5] ಮಂಡ್ಯ ತಾಲ್ಲೂಕಿನ ಕೊತ್ತತ್ತಿ ಗ್ರಾಮದ ಬೋರೇದೇವರ ಗುಡಿಯ ಬಳಿ ನಿಂತಿರುವ ವೀರಗಲ್ಲು ಶಾಸನವು ಇವನ ಕಾಲಕ್ಕೆ ಸೇರಿದಾಗಿದ್ದೆ ಕ್ರಿ.ಶ. 977-78ರಲ್ಲಿ ಪೆರೂರಿನಲ್ಲಿ ಪಲ್ಲವರ ವಿರುದ್ಧ ಸಂಭವಿಸಿದ ಯುದ್ಧದಲ್ಲಿ ಮಡಿದ ಈಶ್ವರ ಗಂಡನೆಂಬ ವೀರನ ಸ್ಮರಣಾರ್ಥವಾಗಿ ನಿರ್ಮಾಣವಾದ ದೇವಾಲಯಕ್ಕೆ ಕೊತ್ತತ್ತಿ ಗ್ರಾಮವನ್ನು ದತ್ತಿ ಬಿಟ್ಟ ಸಂಗತಿಯನ್ನು ತಿಳಿಸುತ್ತದೆ.[6] ಗಂಗರ ಕೊನೆಯ ಅರಸನಾದ ರಕ್ಕಸ ಗಂಗನು ಸುಮಾರು 1004ರಲ್ಲಿ ಚೋಳ ರಾಜರಾಜನ ಆಳ್ವಿಕೆಯಲ್ಲಿ ಯುವರಾಜ ರಾಜೇಂದ್ರ ಚೋಳನೆದುರು ತಲಕಾಡಿನಲ್ಲಿ ಜರುಗಿದ ಘೋರಯುದ್ಧದಲ್ಲಿ ಸೋಲುವುದರೊಂದಿಗೆ ಗಂಗವಾಡಿ ಪ್ರದೇಶ ಚೋಳರ ಕೈ ಸೇರಿತು. ಗಂಗರ ಕಾಲದಲ್ಲಿ ಗುತ್ತಲಿನ ಅರ್ಕೇಶ್ವರ ದೇವಾಲಯವು ಬಸದಿಯಾಗಿತ್ತೆಂಬ ಅಂಶವು ಆ ಗುಂಡಿಯ ಜೀರ್ಣೋದ್ಧಾರ ಕಾಲದಲ್ಲಿ ಪತ್ತೆಯಾದ 1034ರ ಶಾಸನದಿಂದ ವೇದ್ಯವಾಗುತ್ತದೆ. ಗಂಗರಾಜ ಲೋಕ ವಿದ್ಯಾಧರನ ನಿರ್ಮಾಣವನ್ನು ದಾಖಲಿಸಿರುವ ನಿಶಧಿ ಶಾಸನ ಇವಾಗಿದ್ದು ಗಂಗರು ಕೊನೆಯ ಅರಸರುಗಳ ಬಗ್ಗೆ ಹೊಸ ಬೆಳಕನ್ನು ಚೆಲ್ಲುತ್ತದೆ.[7]

ಗಂಗರು ಮಂಡ್ಯ ತಾಲ್ಲೂಕಿನಲ್ಲಿ ಹಲವಾರು ಕೆರೆ ಕಟ್ಟಿ ಹಾಗೂ ದೇವಾಲಯಗಳನ್ನು ಗಂಗರ ಕಾಲದಲ್ಲಿ ನಿರ್ಮಾಣಮಾಡಿದ ಬಗ್ಗೆ ಶಾಸನೋಲ್ಲೇಖಗಳಿವೆ. ಮಂಡ್ಯ ತಾಲ್ಲೂಕಿನ ಬೇಲೂರಿನಲ್ಲಿ ಕೆರೆಯೊಂದನ್ನು ಗಂಗ ಪೆರ್ಗಡೆ ಬಾಸರಾಯ್ಯನು ಕಟ್ಟಿಸಿ ಅದಕ್ಕೆ ತೂಬನ್ನು ಅಳವಡಿಸಿದ ವಿಚಾರ ಗಂಗ ಪೆರ್ಮಾಡಿಯ ಕ್ರಿ.ಶ. 997ರ ಶಾಸನದಲ್ಲಿ ಕಂಡುಬರುತ್ತದೆ.[8] ತಾಲ್ಲೂಕಿನ ಗುತ್ತಲು, ಬೇಲೂರು, ಕೆರಗೋಡು, ಬೂದನೂರು, ಕೊತ್ತತ್ತಿ, ಹಲ್ಲೆಗೆರೆ, ಕೊಮ್ಮೇರಹಳ್ಳಿ ಮುಂತಾದ ಊರುಗಳು ಗಂಗರ ಕಾಲದ ಪ್ರಮುಖ ನೆಲೆಗಳಾಗಿದ್ದವು.

ಗಂಗ ಮತ್ತು ರಾಷ್ಟ್ರಕೂಟರ ನಡುವೆ ಜರುಗಿದ ಮುದಗಂದೂರು ಯುದ್ಧ ನಿರ್ಣಾಯಕವಾಗಿದ್ದು, ಗಂಗರ ರಾಜಕೀಯ ಬದುಕಿನ ಮೇಲೆ ಮಹತ್ವದ ಪ್ರಭಾವವನ್ನು ಅದು ಬೀರಿದ್ದು, ಮಂಡ್ಯ ತಾಲ್ಲೂಕಿನ ಮುದಗುಂದೂರೇ ಅದೆಂದು ವಿದ್ವಾಂಸರು ತರ್ಕಿಸಿದ್ದಾರೆ.

## ಚೋಳರು

ಚೋಳ ವಂಶದ ಆಳ್ವಿಕೆಯು ಮಂಡ್ಯ ತಾಲ್ಲೂಕಿನಲ್ಲಿ ರಾಜೇಂದ್ರ ಜೋಳ -1 ನಿಂದ ಆರಂಭವಾಗುತ್ತದೆ. ಮಂಡ್ಯ ತಾಲ್ಲೂಕಿನ ಚನ್ನಪ್ಪನ ದೊಡ್ಡಿಯಲ್ಲಿರುವ ಭಗ್ನ ಶಾಸನದಲ್ಲಿ ಉತ್ತಮ ಚೋಳ ಹಾಗೂ ರಾಜಕೂಪ ರೈಕೇಸರಿ ಎಂಬ ಪದಗಳನ್ನು ಮಾತ್ರ ಗುರುತಿಸಲಾಗಿದೆ. ಈ ಶಾಸನ ವು 12ನೇ ಶತಮಾನದ ಲಕ್ಷಣವನ್ನು ವ್ಯಕ್ತಪಡಿಸುತ್ತದೆ.[9] ಗಂಗರ ನಂತರ ದೀರ್ಘಕಾಲ ಆಳಿದ ಚೋಳರ ಹಳೇಬೂದನೂರು ಶಾಸನದಲ್ಲಿ ರಕ್ಕಸಗಂಗನು 1004ರಲ್ಲಿ ರಾಜೇಂದ್ರನ ಮಾಂಡಲಿಕನಾಗಿದ್ದನೆಂದು ಉಲ್ಲೇಖಿಸಲಾಗಿದೆ. ಆಗ ಮಂಡ್ಯವು ಚೋಳರ ಮುದಿಗೊಂಡ ಚೋಳಮಂಡಲಕ್ಕೆ ಸೇರಿದ್ದು ರಾಜೇಂದ್ರ ಚೋಳ ಒಳನಾಡಿನಲ್ಲಿ ಇತ್ತು.[10] ಸುಮಾರು 11ನೇ ಶತಮಾನಕ್ಕೆ ಸೇರಿದ ಹಳೇಬೂದನೂರು ವೀರಗಲ್ಲು ಶಾಸನವು, ಕುಂದೂರು ನಾಡನ್ನು ಆಳುತ್ತಿದ್ದ ಕನ್ನಯ್ಯನ ಮಗನಾದ ರಾಜೇಂದ್ರ ಚೋಳನು ಕಾದಾಡುತ್ತಾ ಮಡಿದ ಅಂಶವನ್ನು ದಾಖಲಿಸಿದ್ದು, ತಾಲ್ಲೋಕಿನ ಮೇಲೆ ಚೋಳರ ಆಡಳಿತ ಎಷ್ಟು ಪ್ರಭಾವ ಬೀರಿತ್ತೆಂದು ಈ ಶಾಸನದಿಂದ ವ್ಯಕ್ತವಾಗುತ್ತದೆ. ಚೋಳರ ಶಾಸನಗಳು ಮಂಡ್ಯ ತಾಲ್ಲೂಕಿನಲ್ಲಿ ದೊರೆತಿರುವುದು. ಕಡಿಮೆಯಾದರೂ ಆಡಳಿತವು ಈ ಪ್ರದೇಶದಲ್ಲಿ ಪ್ರಬಲವಾಗಿ ಪೋಷಿತವಾಗಿತ್ತೆಂಬುದು ನಂತರದ ಕಾಲದ ತಮಿಳು ಶಾಸನಗಳಿಂದ ತಿಳಿದುಬರುತ್ತದೆ.

## ಹೊಯ್ಸಳರು

ಗಂಗವಾಡಿಯಲ್ಲಿ ತಲಕಾಡಿನ ಗಂಗರು ತಮ್ಮ ಅಧಿಕಾರವನ್ನು ಕಳೆದುಕೊಂಡ ಮೇಲೆ ಹೊಯ್ಸಳರು ತಮ್ಮ ಸಾಮ್ರಾಜ್ಯದ ಪ್ರಾಬಲ್ಯತೆಯನ್ನು ವಿಸ್ತರಿಸಿ ಕೊಂಡು ಗಂಗವಾಡಿಯ ಕೆಲವು ಭಾಗಗಳನ್ನು ಅಕ್ರಮಿಸಿಕೊಂಡಿದ್ದರು.ಹೊಯ್ಸಳರ ಸುಮಾರು 19 ಶಾಸನಗಳು ಮಂಡ್ಯ ತಾಲ್ಲೋಕಿನಲ್ಲಿ ದೊರೆತಿದೆ. ಅವುಗಳಲ್ಲಿ ಮಂಡ್ಯ ತಾಲ್ಲೋಕಿನಲ್ಲಿ ದೊರೆತ ಹೊಯ್ಸಳರ ಪ್ರಥಮ ಶಾಸನ ಎರೆಯಾಂಗ ಕಾಲಾವಧಿ ಕ್ರಿ.ಶ.1052ರಲ್ಲಿ ವಿಷ್ಣುವರ್ಧನನ ಕಾಲಾವಧಿಯದು.ಎರಡನೇ ನರಸಿಂಹನ ಕ್ರಿ.ಶ.1233-1234 ಕಾಲಾವಧಿಯಲ್ಲಿ ರಚನೆಯಾದದ್ದು, ಸೋಮೇಶ್ವರನ ಕಾಲದ ಶಾಸನಗಳು ಕ್ರಿ.ಶ.1237-1251ರ ಕಾಲಾವಧಿಯಲ್ಲಿ ಕೆತ್ತಲ್ಪಟ್ಟಿವೆ. ಮೂರನೇ ನರಸಿಂಹನ ಕಾಲದ ಶಾಸನ(1256-1286) ಹಾಗೂ ಮೂರನೇ ಬಲ್ಲಾಳನ ಶಾಸನಗಳು ಕ್ರಿ.ಶ.1305-1320 [11] ಬಲ್ಲಾಳನ ಶಾಸನ. ಹೀಗೆ ಒಟ್ಟು 19

ಶಾಸನಗಳು ಮಂಡ್ಯ ತಾಲ್ಲೋಕಿನಲ್ಲಿ ದೊರೆತಿವೆ. ಮಂಡ್ಯ ತಾಲ್ಲೋಕಿನ ಶಾಸನಗಳಲ್ಲಿ ಹೊಯ್ಸಳರದು ಸಿಂಹಪಾಲು ಇವರ ಶಾಸನಗಳು ಹೊಯ್ಸಳ ಸಾಮ್ರಾಜ್ಯದ ಕುತೂಹಲಕರ ಸಂಗತಿಗಳನ್ನು ತಿಳಿಸುವುದಲ್ಲದೆ ಕನ್ನಡ ತಮಿಳು ಹಾಗೂ ಸಂಸ್ಕೃತ ಭಾಷೆಗಳಲ್ಲಿ ರಚಿಸಲ್ಪಟ್ಟಿವೆ. ಹೊಯ್ಸಳರ ಇತಿಹಾಸ ಹಾಗೂ ಉಗಮದ ಬಗ್ಗೆ ಪ್ರಚಲಿತವಿರುವ ಪಾರಂಪರಿಕ ಕಥೆಯನ್ನು ತಿಳಿಸುವ ಹಲವು ಶಾಸನಗಳಿವೆ ಹಾಗೂ ಹೊಯ್ಸಳರ ಆಡಳಿತಕ್ಕೆ ಸಂಬಂಧಿಸಿದಂತೆ ಕ್ರಿ.ಶ.11ನೇ ಶತಮಾನದ ಮದ್ಯಭಾಗದಲ್ಲಿಯೇ ಅವರು ಚೋಳರ ಆಡಳತವನ್ನು ಮಂಡ್ಯ ತಾಲ್ಲೋಕಿನ ಕೆಲವು ಭಾಗಗಳಲ್ಲಿ ವಿರೋಧಿಸಿ ಅಧಿಕಾರ ನಡೆಸಿದ ವಿಚಾರವನ್ನು ತಿಳಿಸುತ್ತದೆ. ಆ ಸಮಯದಲ್ಲಿ ಹೊಯ್ಸಳರ, ಕಲ್ಯಾಣಿ ಚಾಲುಕ್ಯರು ಮಾಂಡಲಿಕರಾಗಿದ್ದರು. ಎರೆಯಂಗನ ಕ್ರಿ.ಶ.1052ರ ಹಳೆಯ ಬೂದನೂರು ಶಾಸನ[12] ಗಳು ಇವುಗಳ ಪೈಕಿ ಉಲ್ಲೇಖನೀಯ ಮಂಡ್ಯ ತಾಲ್ಲೋಕಿನ ಹಳೇಬೂದನೂರಿನ ಸೋಮಶ್ವರ ದೇವಾಲಯ ಬಳಯಿರುವ ವೀರಗಲ್ಲು ಶಾಸನವು ಭಗ್ನಗೊಂಡಿದ್ದು, ಕ್ರಿ.ಶ.1052ರಲ್ಲಿ ಹೊಯ್ಸಳ ಮಂಡಳೇಶ್ವರ ಎರೆಯಂಗನು ನಂದನ ಸಂವತ್ಸರದಲ್ಲಿ ಆಳುತ್ತಿದ್ದಾಗ ವೀರನೊಬ್ಬನ ಮರಣದ ಬಗ್ಗೆ ಉಲ್ಲೇಖಿಸುತ್ತದೆ. ಅಧಿಪನನ್ನು ವಿನಯಾದಿತ್ಯದ ಮಗ ಹೊಯ್ಸಳ ಎರೆಯಂಗನ ಕಾಲದ ಗುರುತಿಸಲಾಗಿದೆ. ಈ ಶಾಸನದ ಉಲ್ಲೇಖವೇ ಎರೆಯಾಂಗನ ಪ್ರಥನ ಉಲ್ಲೇಖವೂ ಆಗಿದೆ.

ಎರಡನೇಯ ಬಲ್ಲಾಳನನ ಕಾಲದ ಮೊತ್ತ ಹಳ್ಳಿಯಲ್ಲಿ ದೊರೆತಿರುವ ಎರಡು ತೃಟಿತ ಶಾಸನಗಳು 1191-92ರ ಕಾಲಕ್ಕೆ ಸೇರಿದ್ದಾಗಿದೆ.[13] ಶಾಸನಗಳ ಉದ್ದೇಶ ತಿಳಿದು ಬರುವುದಿಲ್ಲ. ಆದರೆ ಅವು ಹೋರಾಟಕ್ಕೆ ಸಂಬಂಧಿಸಿದಂತೆ ತೋರುತ್ತದೆ. ಎರಡರಲ್ಲಿಯೂ ಸೂಸಿಯಪ್ಪ ನಾಯಕ ಎಂಬೊಬ್ಬ ಸಾಮಂತನ ಹೆಸರಿದೆ. ಈತನನ್ನು ಇಮ್ಮಡಿ ವೀರ ಬಲ್ಲಾಳನ ಬಲಗಯ್ಯ ಸೇನಾಧಿಪತಿ ಎಂದು ವರ್ಣಿಸಿದೆ. ಎರಡನೇಯ ಶಾಸನವು ಆ ಸಾಮಂತನ ಮಗನನ್ನು ಕುರಿತದ್ದಾಗಿದ್ದು ಬಹುಶಃ ಈ ಯುದ್ಧದಲ್ಲಿ ಆತನು ಪ್ರಾಣ ತೆತ್ತನೆಂದು ತೋರುತ್ತದೆ.

ಎರಡನೇ ನರಸಿಂಹನ ಕಾಲದ ಬಸರಾಳು ಶಾಸನವು ರಾಜನ ವಂಶಾವಳಿಯನ್ನು ತಿಳಿಸುವುದಲ್ಲದೆ. ಆತನ ಪ್ರಧಾನಿ ತೆನೆದಂಕವಂಶದ ಹರಿಹರ ದಂಡ ನಾಯಕನು ತನ್ನ ತಮ್ಮಂದಿರಾದ ಸಿಂಗೆಯ ನಾಯಕ ಮತ್ತು ಮಾರೆಯ ನಾಯಕರೊಡಗೂಡಿ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿಸಿ ಕೆರೆಯನ್ನು

ನಿರ್ಮಿಸಿ ರಾಜನಿಂದ ಭೂಮಿಯನ್ನು ಪಡೆದು ದತ್ತಿಯಾಗಿ ಬಿಟ್ಟಿದ್ದನ್ನು ತಿಳಿಸುತ್ತದೆ.[14] ಮೂರು ವರ್ಷದ ನಂತರ ಕ್ರಿ.ಶ.1237ರಲ್ಲಿ ಹೊಯ್ಸಳ ಸೋಮೇಶ್ವರನು ಆಳುತ್ತಿದ್ದಾಗ ಹರಿಹರ ದಂಡನಾಯಕನು ಬಸುರಿವಾಳಕ್ಕೆ ಸೇರಿದ ಬೇಬಿ ಮತ್ತು ತರಣಿ ಎಂಬ ಎರಡು ಉಪ ಗ್ರಾಮಗಳನ್ನು ಪೂಜಾರಿಗಳು, ಪರಿಚಾರಕರು, ಬಾಣಸಿಗ ತೋಟಿಗ ಮಾಲೆಗಾರ ಮುಂತಾದ ಯೋಗಿಗಳ ಜೀವತಕ್ಕಾಗಿ ದತ್ತಿ ಬಿಟ್ಟಿದ್ದನು ಬಸರಾಳು ಶಾಸನದಲ್ಲಿಯೇ[15] ಸೋಮೇಶ್ವರನ ಕಾಲದ ಶಾಸನವಿದ್ದು, ಕಾವ್ಯದಿಂದ ಕೂಡಿದೆ. ಈ ಶಾಸನದ ಒಂದು ಪದ್ಯ ಸೂಕ್ತ ಸುದಾರ್ಣವ ಗ್ರಂಥದಲ್ಲಿದೆ. ಇಮ್ಮಡಿ ವೀರಬಲ್ಲಾಳ ಕಾಲಾವಧಿಯದೇ ಆದ ರಾಯಶೆಟ್ಟಿಪುರ ಶಾಸನ ಸ್ವಾರಸ್ಯಕರವಾದಿದ್ದಾಗಿದೆ.[16] ಇಮ್ಮಡಿ ವೀರಬಲ್ಲಾಳನ ಆಳಿಕೆಯಲ್ಲಿ ಕ್ರಿ.ಶ.1185 ಏ.2ರಂದು ಬಿದಿರುಕೋಟೆಗೆ ಸೇರಿದ ಮಲ್ಲೆಯನಾಯಕ ಮತ್ತು ಸೋಮಯನಾಯಕ ಈ ಇಬ್ಬರೂ ತಮ್ಮ ಹಳ್ಳಿಯನ್ನು ಶಿವಪುರವಾಗಿ ಪರಿವರ್ತಿಸಿದರು. ಆದರೆ 70 ವರ್ಷಗಳ ನಂತರ ಸೋಮಶ್ವರನು ಕಣ್ಣಾನೂರಿನಿಂದ ಆಳುತ್ತಿದ್ದಾಗ ಮಾದಯನಾಯಕನು ಅದು ಶಿವಪುರವಾಗುವುದನ್ನು ಬಲಾವಾಗಿ ವಿರೋಧಿಸಿದರು. ಇದು ಅಲ್ಲಿನ ವೀರಶೈವರನ್ನು ಉದ್ರೇಕಗೊಳಿಸಿತು. ವೀರಮಲ್ಲಯ್ಯನೆಂಬ ವೀರಶೈವ ನಾಲ್ಪಸೆಯ ಸೀಮಾಶಿಲೆ (ಗಡಿಗಲ್ಲು) ಗಳ ಬಳಿ ಬಹುಶಃ ಆತ್ಮಾರ್ಪಣೆ ಮಾಡಿಕೊಂಡ ದೃಶ್ಯವನ್ನು ನೋಡಲಾಗಿದೆ ಹಾಗೂ ಜನರ ಅಸಮತ್ತಿ ಕಂಡು ಶಿವಪುರವನ್ನು ಅಲ್ಲಿನ ಮುಖ್ಯಸ್ಥರಿಗೆ ಬಿಟ್ಟು ಕೊಟ್ಟನು. ಅವರು ಅದಕ್ಕೆ ಸೋಮನಾಥವುರವೆಂದು ಹೆಸರಿಟ್ಟರು. ಅದರ ಸಂಪೂರ್ಣ ವಿವರ ಆ ಶಾಸನದಲ್ಲಿದೆ.[17]

ಮೂರನೇ ನರಸಿಂಹನ ಕಾಲಾವಧಿಯ ಕ್ರಿ.ಶ.1276ರ ಹೊಸಬೂದನೂರಿನ ಶಾಸನವು ಸ್ಥಾನಿಕ ನಂಬಿಪಿಳ್ಳೆಯ ಮಗ ಪುರುಷೋತ್ತಮದೇವ ಮತ್ತು ಅವನ ಅಣ್ಣ ಆದೂರನ ಮಗ ನಂಬಿಪಿಳ್ಳೆಯೂ ಉದ್ಭವ ಸರ್ವಜ್ಞ ಪದ್ಮನಾಭಪುರದ ಮಹಾರಾಜರಿಗೆ ಕೇಶವ ದೇವರ ದೇವದಾನ ವಾಗಿದ್ದ ಒಂದು ಊರನ್ನು ಕುಡಿನಿಂಕಾದೇವದಾನವಾಗಿ ಕೊಟ್ಟಂತೆ ತಿಳಿಸುತ್ತದೆ. ಕುಡಿನಿಂಕಾದೇವದಾನ ಎಂಬುದು ತಮಿಳು ಪದದ ಉಲ್ಲೇಖವಿದೆ, ಹೀಗೆಂದರೆ ಈಗಾಗಲೇ ಭೂಮಿಯನ್ನು ಉಳುತ್ತಿದ್ದ ಒಕ್ಕಲುಗಳನ್ನು ಹೊರದೂಡದೆ ದೇವರಿಗೆ ದತ್ತಿ ಬಿಟ್ಟ ಭೂಮಿ ಈ ರೀತಿಯ ಭೂಮಿಯನ್ನು ದೇವರ ಪೂಜೆ ಅಮೃತಪಡಿಗಳಿಗಾಗಿ ಮಹಾಜನಗಳಿಗೆ ವಹಿಸಿದ ಒಟ್ಟು ವಿಷಯವನ್ನು ವಿಷಯವನ್ನು ಶಾಸನ ಒಳಗೊಂಡಿದೆ.

ಮೂರನೇ ಬಲ್ಲಾಳನ ಮರಡಿಪುರ ಶಾಸನ(ಮಂಡ್ಯ-13) ಕ್ರಿ.ಶ.1305ರ ಕಾಲಾವಧಿಯದು ಈ ಶಾಸನದಲ್ಲಿ ಶಿವಶರಣರನೇಕರನ್ನು ಹೆಸರಿಸಿ ಒಂದು ಪ್ರಶಸ್ತಿಯಿದೆ. ಈ ಶರಣರಲ್ಲಿ ಅನೇಕರು ಬಸವಣ್ಣನಿಗಿಂತ ತುಂಬ ಹಿಂದಿನವರೂ ಕೆಲವರು ಆತನ ಸಮಕಾಲೀನರಾಗಿದ್ದಂತೆ ತೋರುತ್ತದೆ. ಎಮ್ಮೆಯ ಕೇತನಹಳ್ಳಿಯ ಕಲಿದೇವರಿಗೆ ಆ ಗ್ರಾಮವನ್ನು ಶಿವಪುರವನ್ನಾಗಿ ದತ್ತಿ ಬಿಟ್ಟಿದ್ದನು ಈ ಶಾಸನ ತಿಳಿಸುತ್ತದೆ.[18]

ಹೀಗೆ ಹೊಯ್ಸಳರ ಆಡಳಿತಾವಧಿಯಲ್ಲಿ ರಾಜ್ಯದ ಇತರೆ ಭಾಗಗಳಲ್ಲಾದಂತೆ ಈ ತಾಲ್ಲೋಕಿನಲ್ಲೂ ಸಾಮಾಜಿಕ ಆರ್ಥಿಕ ಹಾಗೂ ಸಾಂಸ್ಕೃತಿಕ ರಂಗಗಳಲ್ಲಿ ಗಣನೀಯ ಪ್ರಮಾಣದಲ್ಲಿ ಅಭಿವೃದ್ಧಿಯಾಯಿತು. ಬೌದ್ಧ, ಜೈನ, ಶೈವ, ವೈಷ್ಣವ ಹಾಗೂ ಶ್ರೀ ವೈಷ್ಣವ ಧರ್ಮಗಳು ರಾಜಾಶ್ರದಲ್ಲಿ ರಕ್ಷಣೆ ಪಡೆದವು ಬಸರಾಳು ದುದ್ದ ಗುತ್ತಲು, ಬೂದನೂರು, ಹೊಳಲು ಮೊದಲಾದ ಸ್ಥಳಗಳು ಸಾಂಸ್ಕೃತಿಕ ಮಹತ್ವ ಪಡೆದವು.

## ವಿಜಯ ನಗರ ಸಾಮ್ರಾಜ್ಯ

ಮಂಡ್ಯ ತಾಲ್ಲೋಕಿನ ವಿಜಯನಗರ ಕಾಲದ 8 ಶಾಸನಗಳು ದೊರೆತಿವೆ. 1ನೇ ಹರಿಹರ ಶಾಸನ ಕ್ರಿ.ಶ.1341 ಬುಕ್ಕಣ್ಣವೊಡೆಯನ ಶಾಸನ 2ನೇ ಹರಿಹರನ ಶಾಸನ ಕ್ರಿ.ಶ.1382, 1ನೇ ದೇವರಾಯನ ಶಾಸನ, ಕ್ರಿ.ಶ.1417, ಮಲ್ಲಿಕಾರ್ಜುನ ಶಾಸನ ಕ್ರಿ.ಶ.1459, ಕೃಷ್ಣದೇವರಾಯನ ಶಾಸನ ಕ್ರಿ.ಶ .1514-15, ರಾಮದೇವರಾಯನ ಶಾಸನ ಕ್ರಿ.ಶ.1633 ಇಷ್ಟು ಶಾಸನಗಳು ವಿಜಯನಗರ ಅರಸರ ಕಾಲಾವಧಿಯವಾಗಿದೆ.[19] ( ಪಟ್ಟಿಯನ್ನು ನೀಡಲಾಗಿದೆ).

ಮೊದಲನೇ ಹರಿಹರನ ಶಾಸನವು ಮಂಡ್ಯ ತಾಲ್ಲೋಕಿನ ಬೀಜನಹಳ್ಳಿಯಲ್ಲಿ ದೊರೆತಿದ್ದು, ವಿಜಯನಗರ ಸಾಮ್ರಾಜ್ಯಕ್ಕೆ ಮತ್ತು ಈ ಜಿಲ್ಲೆಗೆ ಇದ್ದ ಪ್ರಾಚೀನ ಸಂಬಂಧಗಳಿಗೆ ಮೂಲ ಆಧಾರವಾಗಿದೆ. ಈ ಶಾಸನದಲ್ಲಿ ನವಲುವಶಿ ಎಂಬ ಸ್ಥಳದ ಭೀಮನೆಂಬ ವೀರನ ಪತ್ನಿ ತಿಮ್ಮವ್ವೆಯು ತನ್ನ ಪತ್ನಿಯ ಸ್ಮರಣಾರ್ಥವಾಗಿ ಹಾಕಿಸಿದ ವೀರಗಲ್ಲು ಶಾಸನಗಳವಾಗಿದ್ದು, ವೀರ ಬುಕ್ಕಣ್ಣವೊಡೆಯನ ಆಳ್ವಿಕೆಯ ಬಗ್ಗೆ ಉಲ್ಲೇಖಿಸುತ್ತದೆ.[20]

ಮಲ್ಲಿಕಾರ್ಜುನನ ಕಾಲಾವಧಿಯ ಮಂಡ್ಯ ತಾಲ್ಲೋಕಿನ ದಣ್ಣಾಯಕ ಪುರದ ಕ್ರಿ.ಶ.1459ರ ಲಿಂಗಮುದ್ರೆ ಶಾಸನವು ಪೆನುಗೊಂಡದಿಂದ ಆಡಳಿತವನ್ನು ನಿರ್ವಹಿಸುತ್ತಿದ್ದ ತಿಮ್ಮಣ್ಣ ದಣ್ಣಾಯಕನ ಆದೇಶದನ್ವಯ ಹಾಗೂ ಮಳಲಿಯ ತಿಪ್ಪಯ್ಯನ ಒಪ್ಪಿಗೆಯ ಮೇರೆಗೆ ಬೆಳ್ಳ ತೂರಿನ ರಾಮನಾಥ ದೇವರಿಗೆ ಅಂಗರಂಗ ಬೋಗಕ್ಕೆಂದು ಈ ಸ್ಥಳವನ್ನು ದತ್ತಿ ಬಿಟ್ಟ ವಿಚಾರವನ್ನು ತಿಳಿಸುತ್ತದೆ[21] ಮಂಡ್ಯ ತಾಲ್ಲೋಕಿನ ಮೊತ್ತಹಳ್ಳಿಯಲ್ಲಿರುವ ಶಾಸನವು ಕೃಷ್ಣದೇವರಾಯನ ಕಾಲಕ್ಕೆ ಸೇರಿದ್ದಾಗಿದೆ. ಮಂಠೆಯ ಗ್ರಾಮವನ್ನು 'ಕೃಷ್ಣರಾಯಪುರ'ವೆಂದು ಕರೆದು ಇದರ ಜೊತೆಗೆ ಶ್ರೀರಂಗಪಟ್ಟಣ ಸೀಮೆಯ ಸಣ್ಣ ಹಳ್ಳಿಗಳಾದ ಚಿಕ್ಕ ಮಂಠೆಯ , ಕಲ್ಲಹಳ್ಳಿ, ಹೊಸಹಳ್ಳಿ, ತೊಂಡಸೇಹಳ್ಳಿ, ಮತ್ತು ಕೋಣೆನಹಳ್ಳಿಗಳನ್ನು ಗೃಹಪರ್ವತ ದಾನವನ್ನು ಗೋವಿಂದರಾಜನಿಗೆ ನೀಡಿದ ಬಗ್ಗೆ ಈ ಶಾಸನದಲ್ಲಿ ಮಾಹಿತಿ ಇದೆ.[22]

ಮಂಡ್ಯ ತಾಲ್ಲೋಕಿನ ಹೆಬ್ಬಕವಾಡಿಯ ಕ್ರಿ.ಶ.1537ರ ಶಾಸನವು ವಿಜಯನಗರದ ಅಚ್ಯುತರಾಯನ ಆಳ್ವಿಕೆಯ ಅವಧಿಯಲ್ಲಿ ಹೆಬ್ಬಕವಾಡಿಯ ದಾನವೊಂದನ್ನು ನವೀಕರಿಸಿ ಸೋಮನಾಥಪುರದ ಚೆನ್ನಕೇಶವ ದೇವಾಲಯದ ಜೀರ್ಣೋದ್ಧಾರಕ್ಕಾಗಿ ವಾರಣಾಸಿಯ ವರದೈ ಅಣ್ಣಯ್ಯನೆಂಬ ಅಧಿಕಾರಿಯು ಹೆಬ್ಬಕವಾಡಿ ಗ್ರಾಮವನ್ನು ದತ್ತಿ ಬಿಟ್ಟ ವಿಚಾರವನ್ನು ತಿಳಿಸುತ್ತದೆ.[23] ಹೀಗೆ ವಿಜಯ ನಗರದ ಅರಸರು ಮಂಡ್ಯ ತಾಲ್ಲೋಕಿನಲ್ಲಿ ಸಾಮಾಜಿಕ , ಆರ್ಥಿಕ ಹಾಗೂ ಸಾಂಸ್ಕೃತಿಕ ಅಭಿವೃದ್ದಿಗೆ ಕಾರಣರಾದರು.

## ಮೈಸೂರು ಒಡೆಯರು

ಎರಡು ಶಾಸನಗಳು ಮಂಡ್ಯ ತಾಲ್ಲೋಕಿನಲ್ಲಿ ದೊರೆತಿವೆ. ಎರಡನೇ ಕೃಷ್ಣ ರಾಜನ ಕ್ರಿ.ಶ.1760ರ ಕಾಲದ ಶಾಸನ ಮುದಗುಂಡೂರಿನ ತಾಮ್ರ ಶಾಸನವಾಗಿದ್ದು, ಪಟ್ಟಣ ಹೋಬಳಿಯ ವಿಚಾರದ ಚಾವಡಿಯ ಆಡಳಿತದ ನಾಗಮಂಗಲ ಸ್ಥಳಕ್ಕೆ ಸೇರಿದ ಕಲಿದೇವನಹಳ್ಳಿ ಗ್ರಾಮ ಮತ್ತು ಅದರ ಉಪಗ್ರಾಮ ಹೊನ್ನೂರನ್ನು ಇಮ್ಮಡಿ ರಾಜವೊಡೆಯನು ಕೃಷ್ಣಯ್ಯ ಮತ್ತು ಗೋವಿಂದಯ್ಯರಿಗೆ 2117ವರಹ ಬೆಲೆಗೆ ಮಾರಿದ ವಿಷಯವನ್ನು ತಿಳಿಸುತ್ತದೆ.[23] ಒಡೆಯರ ಹೆಚ್ಚು ಶಾಸನಗಳು ಮಂಡ್ಯ ತಾಲ್ಲೋಕು ಕಂಡು ಬರುವುದಿಲ್ಲ.

## ಅಡಿಟಿಪ್ಪಣಿ

1. ಸುವರ್ಣ ಮಂಡ್ಯ, ದೇಜಗೌ, ಪುಟ ಸಂ. 88
2. ಮಂಡ್ಯ ಗೆಜೆಟಿಯರ್ ಪು. ಸಂ. 34

   ಕೆಳಗಿನವುಗಳ ಎಫಿಗ್ರಾಫಿಯಾ ಕರ್ನಾಟಕ 7ನೇ ಸಂಪುಟದ ಶಾಸನ ಸಂಖ್ಯೆಗಳು ಇವು ಗಂಗರ ಕಾಲಕ್ಕೆ ಸಂಬಂಧಿಸಿದವು.
3. ಎಫಿಗ್ರಾಪಿಯ ಕರ್ನಾಟಕ ಸಂಪುಟ ಏಳು, ಮಂಡ್ಯ 35, 14, 81, 67, 54
4. ಅದೇಮಂಡ್ಯ 35
5. ಅದೇಮಂಡ್ಯ 51, 52, 53, 54, 63
6. ಅದೇಮಂಡ್ಯ 81
7. ಅದೇ ಮಂಡ್ಯ 59, 60, 61, 62, 63
8. ಅದೇ ಮಂಡ್ಯ 67
9. ಅದೇ ಮಂಡ್ಯ 66
10. ಅದೇಮಂಡ್ಯ 51
11. ಅದೇ ಮಂಡ್ಯ 52, 12, 26, 80, 69, 29, 30, 23, 34, 27, 31, 35, 56, 41, 13, 60, 72, 36, (ಹೊಯ್ಸಳ ಕಾಲಕ್ಕೆ ಸಂಬಂಧಿಸಿದುದು)
12. ಅದೇ ಮಂಡ್ಯ 52
13. ಅದೇ ಮಂಡ್ಯ 78, 79
14. ಅದೇ ಮಂಡ್ಯ 28
15. ಅದೇ ಮಂಡ್ಯ 29
16. ಅದೇ ಮಂಡ್ಯ 34
17. ನಾಗರಾಜ್.ಎಂ.ಜಿ, ಸಾಂಸ್ಕೃತಿಕ ವೀರಶೈವ, ಪುಟ ಸಂಖ್ಯೆ -23
18. ಅದೇಮಂಡ್ಯ 13
19. ಅದೇ ಮಂಡ್ಯ 19, 8, 77, 73, 39, 79, 28

    (ವಿಜಯನಗರ ಕಾಲಕ್ಕೆ ಸಂಬಂಧಿಸಿದ ಶಾಸನಗಳು)
20. ಅದೇ ಮಂಡ್ಯ 19
21. ಅದೇ ಮಂಡ್ಯ 39
22. ಅದೇಮಂಡ್ಯ 23
23. ಅದೇ ಮಂಡ್ಯ 76
24. ಅದೇ ಮಂಡ್ಯ 24

## ಅಧ್ಯಾಯ-2

# ಶಾಸನಗಳು ಅರ್ಥ

ಯಾವುದೇ ಪ್ರದೇಶದ ಭಾಷೆ, ಸಾಹಿತ್ಯ, ಸಂಸ್ಕೃತಿ, ಇತಿಹಾಸಗಳ ಅಧ್ಯಾಯನಕ್ಕೆ ಶಾಸನಗಳು ಅಮೂಲ್ಯ ಅಕರಗಳು ಶಾಸನಗಳು ಒಂದು ಜನಾಂಗದ ಆಸ್ತಿ ಸುದೈವದಿಂದ ನಮ್ಮ ನಾಡಿಸಿ ಶಾಸನ ಸಂಪತ್ತು ಹೇರಳವಾಗಿದೆ. ತಮಿಳನ್ನುಬಿಟ್ಟರೆ ಕನ್ನಡ ದಲ್ಲಿಯೇ ಹೆಚ್ಚು ಸಂಖ್ಯೆಯ ಶಾಸನಗಳು. ಕಂಡುಬರುತ್ತವೆ.

1. 1884ರಲ್ಲಿ ಮೈಸೂರಿನಲ್ಲಿ ಪುರಾತತ್ವ ಇಲಾಖೆ ಸ್ಥಾಪನೆಯಾದಾಗ ಅದರ ನಿರ್ದೇಶಕರಾಗಿ ನೇಮಕಗೊಂಡ ಬಿ.ಎಸ್.ರೈಸ್ ಅವರು 1906ರವರೆಗಿನ ಅವಧಿಯಲ್ಲಿ ಅಂದಿನ ಮೈಸೂರು ರಾಜ್ಯದ ಎಂಟು ಜಿಲ್ಲೆಗಳಲ್ಲಿ ಮತ್ತು 8869 ಶಾಸನಗಳನ್ನು ಸಂಗ್ರಹಿಸಿ ದರು. ಮಂಡ್ಯ ಜಿಲ್ಲೆಯನ್ನೊಳಗೊಂಡ ಅಂದಿನ-ಮೈಸೂರು ಮತ್ತು ಶಿವಮೊಗ್ಗ ಜಿಲ್ಲೆಯ ಶಾಸನಗಳು ಎರಡೆರಡು ಸಂಪುಟಗಳಲ್ಲಿ ಪ್ರಕಟವಾದವು.

ಕಲ್ಲಿನ ಮೇಲೆ ಕೊರೆದ ಪ್ರಾಚೀನ ಕಾಲದ ಬರಹವನ್ನು ಶಿಲಾಶಾಸನ ಎಂದು ಕರೆಯುತ್ತೇವೆ. ಶಾಸನಗಳನ್ನು 2 ವರ್ಗಗಳಾಗಿ ವಿಂಗಡಿಸಲಾಗಿದೆ.ಅವುಗಳುಶಿಲಾಶಾಸನ ಮತ್ತು ತಾಮ್ರ. ಇವುಗಳನ್ನು ಮುಖ್ಯವಾಗಿ ರಾಜರು, ಮಾಂಡಲೀಕರು, ಪಾಳೇಗಾರರು ತಮ್ಮ ಅಧಿಕಾರ ಮುದ್ರೆಯಿಂದ ಬರೆಸುತ್ತಿದ್ದರು. ಮೌರ್ಯ ಚಕ್ರವರ್ತಿ ಅಶೋಕನ ಕಾಲದಿಂದ ಹಿಡಿದು ಮೈಸೂರು ಅರಸರ ಅವಧಿಯಲ್ಲಿ ಹೊರಡಿಸಿದ ಶಾಸನಗಳು ಸಹಸ್ರಾರು ಇಲ್ಲಿಯವರೆಗೆ ಸುಮಾರು 80,000 ಶಾಸನಗಳು ಪ್ರಾಪ್ತವಾಗಿವೆ. ಅವುಗಳಲ್ಲಿ ಕರ್ನಾಟಕದ ಶಾಸನಗಳ ಸಂಖ್ಯೆ ಗಣನೀಯವಾದುದು ಇಲ್ಲಿನ ಶಾಸನಗಳು ಬ್ರಾಹ್ಮಿ ಲಿಪಿ, ಕನ್ನಡ, ತೆಲಗು, ತಮಿಳು ಲಿಪಿ ಶಾಸನಗಳ ಸುವ್ಯವಸ್ಥಿತವಾದ ಅಧ್ಯಯನ ಆರಂಭವಾದದ್ದು ವಾಲರ್ ಇಲಿಯಟ್ ಎಂಬಾತನಿಂದ ಕ್ರಿ.ಶ.1837ರಲ್ಲಿ ಪ್ರಕಟವಾದ ಅವನ **Hindhu Inscriptions** ಎಂಬ ಲೇಖನದಿಂದ[1] . ದಕ್ಷಿಣ ಭಾರತದಲ್ಲಿ ಆಳಿಕ ನಡೆಸಿದ ಶಾತವಾಹನರು, ಪಲ್ಲವರು, ಕದಂಬರ್, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಸೆವುಣರು, ಚೋಳರು, ವಿಜಯನಗರ ಸಾಮ್ರಾಟರು , ಮೈಸೂರಿನ ಒಡೆಯರು ಅನೇಕ ಶಾಸನಗಳನ್ನು

ಹೊರಡಿಸಿದರು. ಈ ಶಾಸನಗಳಲ್ಲಿ ರಾಜರು ತಮ್ಮ ರಾಜ್ಯದ ವ್ಯಾಪ್ತಿ, ದಾನಕೊಟ್ಟ ವಿಚಾರ ದೇವಾಲಯಕ್ಕೆ ಬಿಟ್ಟ ದತ್ತಿ, ಅಗ್ರಹಾರಗಳು ಕಟ್ಟಿಸಿದ ಕೆರೆ, ದೇವಾಲಯಗಳ ವಿವರಗಳನ್ನು ತಿಳಿಸುತ್ತಿದ್ದರು. ಇವುಗಳ ಅಧ್ಯಾಯನದ ಆಧಾರದ ಮೇಲೆ ನಾವು ಅಂದಿನ ಸ್ಥಿತಿಗತಿಯನ್ನು ತಿಳಿಯಬಹುದಾಗಿದೆ.ಶಾಸನಗಳ ಅಧ್ಯಾಯನದಲ್ಲಿ ಇಲ್ಲಿಯ ವ್ಯಾಪ್ತಿಗೆ ಮಂಡ್ಯ ತಾಲ್ಲೋಕಿನ ಶಾಸನೋಕ್ತ ದೇವಾಲಯಗಳ ಅಧ್ಯಾಯನ ಒಳಗೊಂಡಿದೆ.

ಶಾಸನಗಳ ಗುಂಪಿನಲ್ಲೇ ಸೇರಬಹುದಾದ ಮತ್ತೆರಡು ಶಿಲಾಲೇಖಗಳು ವೀರಗಲ್ಲು ಮತ್ತು ಮಾಸ್ತಿಗಲ್ಲು ಅಥವಾ ಮಹಾಸತಿ ಕಲ್ಲು, ದುಷ್ಟರನ್ನೋ ಅಥವಾ ಶತ್ರುಗಳನ್ನೋ ಸಂಹರಿಸುವಲ್ಲಿ ವೀರಾವೇಶದಿಂದ ಹೋರಾಡಿ ಆತ್ಮಾರ್ಪಣೆ ಮಾಡಿದ ವೀರಗ್ರಣಿಗಳ ಸ್ಮಾರಕವಾಗಿರುವ ವೀರುಗಲ್ಲುಗಳು ಅಂದಿನ ಜನಜೀವನ ಹಾಗೂ ಆಚಾರ ವಿಚಾರಗಳನ್ನು ತಿಳಿಯಲು ಅನುಕೂಲವಾಗಿವೆ.

ಒಂದು ದೇಶದ ಸಂಸ್ಕೃತಿಯ ಪ್ರತೀಕ ಗಳೆಂದರೆ ಸ್ಮಾರಕಗಳು ಕಲೆ ಮತ್ತು ವಾಸ್ತುಶಿಲ್ಪ ಕೆಲವೊಮ್ಮೆ ಸಾಹಿತ್ಯ ಮತ್ತು ಶಾಸನಗಳು ತಿಳಿಸಲಾರದ ಅಂಶಗಳನ್ನು ಸ್ಮಾರಕಗಳ ಅಧ್ಯಾಯನದಿಂದ ತಿಳಿಯಬಹುದು. ಶಾಸನ ಎಂಬ ಸಂಸ್ಕೃತ ಪದಕ್ಕೆ 'ಆಜ್ಞೆ' ರಾಜಾಜ್ಞೆ ಎಂಬ ಅರ್ಥವಿದೆ. 'ಶಾಸ್' ಎಂಬ ಧಾತುವಿನಿಂದ ಬಂದದ್ದು, 'ಶಾಸನ', 'ಶಾಸ್' ಧಾತುವಿಗೆ ಆಜ್ಞಾಪಿಸು, ಶಿಕ್ಷಿಸು ನಿಯಂತ್ರಿಸು ಎಂಬ ಅರ್ಥಗಳಿವೆ. ಶಾಸನ ಶಬ್ದಕ್ಕೆ ಈಗಲೂ ಕಾನೂನು ಎಂಬ ಅರ್ಥ ಪ್ರಪಲಿತವಾಗಿರುವುದರನ್ನು ಗಮನಿಸಬಹುದು. ಶಾಸನ ಎಂಬುವುದು ಮೂಲತಃ ದಾನ ಸಂಬಂಧವಾದ ರಾಜಾಜ್ಞೆಯಾಗಿತ್ತು[2].

ಇಂದು ಶಾಸನ ಶಬ್ಧ ಬಳಕೆಗೊಳ್ಳುವುದು ವಿಶಾಲವಾದ ಅರ್ಥದಲ್ಲೆ ಮೊದಲ ಹಂತದಲ್ಲಿ ಶಾಸನಗಳು ರಾಜ ಕೊಟ್ಟ ದಾನಗಳನ್ನು ತತ್ಸಂಬಧವಾದ ನಿಯಮುಗಳನ್ನು ಹೇಳು ತ್ತಿದ್ದವು. ಉದಾಹ್ಹರಣೆಗೆ ದಾನವಾಗಿ ಕೊಟ್ಟ ಭೂಮಿಗೆ ತೆರಿಗೆಯ ವಿನಾಯಿತಿಯನ್ನು ತಿಳಿಸುವ ಆಜ್ಞೆ ಅವು ಒಳಗೊಂಡಿರುತ್ತಿದ್ದುವು. ಮುಂದೆ ರಾಜರಲ್ಲದೆ ಬೇರೆಯಯವರು ಕೊಟ್ಟದಾನಗಳನ್ನು ಉಲ್ಲೇಖಿಸುವ ಬರಹಗಳು ಶಾಸನಗಳೆಂದೇ ಕರೆಯಿಸಿಕೊಂಡವು.ನಂತರ ಮುಂದೆ ದಾನಕ್ಕೆ ಸಂಬಂಧಿಸಿದ, ರಾಜಾಜ್ಞೆಯನ್ನೊಳ ಗೊಂಡಿರದ ಸಂಕೀರ್ಣ ವಿಷಯ ಬರಹಗಳಿಗೆಲ್ಲ ಶಾಸನ ಎಂಬ ಹೆಸರು ಅನ್ವಯವಾಗ ತೊಡಗಿತು. ಇಂದು ಶಾಸನವೆಂದರೆ ದಾನಶಾಸನವೇ ಆಗಿರಬೇಕಾಗಿಲ್ಲ. ಇತರ

ವಿಷಯಗಳನ್ನೂ ಹೇಳುವಂಥದಾಗಿರ ಬಹುದು. ಅದು ಆಜ್ಞೆಯೇ ಆಗಿರಬೇಕಾಗಿಲ್ಲ ಯಾವುದೇ ಸಂಗತಿಯ ನಿರೂಪಣೆಯಷ್ಟೇ ಆಗಿರಬಹುದು. ಶಾಸನಕ್ಕೆ ಸಮಾನಾರ್ಥಕವಾಗಿ ಬಳಕೆಯಾಗುತ್ತಿರುವ ಇಂಗ್ಲೀಷ್ ಶಬ್ದ Inscription ಅಥವಾ Epigraph ಈ ಶಬ್ದಕ್ಕೆ ಮೂಲತಃ ರಾಜಾಜ್ಞೆಯೆಂಬ ಅರ್ಥವೇನು? ಇರದೆ ವಿಶಾಲವಾದ ಅರ್ಥವಿದೆ Inscribe ಎಂದರೆ 'ಕೆತ್ತು' ಎಂದರ್ಥ ಈ ವ್ಯಾಪಕಾರ್ಥದಲ್ಲೇ ಡಿ.ಸಿ.ಸರ್ಕಾರ್ ಅವರು ಶಾಸನದ ಲಕ್ಷಣಗಳನ್ನು ಹೀಗೆ ಹೇಳುತ್ತಾರೆ. " ಶಾಸನವೆಂದರೆ ಯಾವುದಾದರೊಂದು ಪದಾರ್ಥದ ಮೇಲೆ ಕೊರೆದ ಯಾವುದೇ ಬರಹವೆಂದು ಅಕ್ಷರಶಃ ಅರ್ಥವಾಗುತ್ತದೆ.

ಜೆ.ಎಫ್.ಫ್ಲೀಟ್ ಅವರು ಭಾರತೀಯ ಶಾಸನಗಳ ಮೂಲಾರ್ಥವನ್ನೂ ಈಚೆಗೆ ಅದು ಪಡೆದುಕೊಂಡ ವಿಸ್ತಾರವನ್ನೂ ಲಕ್ಷ್ಯದಲ್ಲಿರಿಸಿಕೊಂಡು ಶಾಸನ ಲಕ್ಷಣವನ್ನು ಹೆಚ್ಚು ಸಮರ್ಪಕವಾಗಿ ನಿರೂಪಿಸಿದ್ದಾರೆ. ಶಾಸನಗಳು ಬಹು ಸಂದರ್ಭಗಳಲ್ಲಿ ಅಧಿಕೃತ ಲಕ್ಷಣಯುಳ್ಳ ಸಾಧಾರಣಾವಾಗಿ ಹೆಚ್ಚು ಕಡಿಮೆ ಸಾರ್ವಜನಿಕ ಸ್ವರೂಪವುಳ್ಳ ಸರಳವಾದ ಅಥವಾ ಸಂಕೀರ್ಣವಾದ ಸಂಗತಿಗಳನ್ನು ತಿಳಿಸುವ ದಿನಾಂಕವಿರುವ ಅಥವಾ ಇಲ್ಲದಿರುವ ಮತ್ತು ತಾವು ಪ್ರಸ್ತಾಪಿಸುವ ವಿಷಯಗಳ ಬಗ್ಗೆ ಶಾಶ್ವತವಾದ ದಾಖಲೆಗಳಾಗಬೇಕೆಂದು ಉದ್ದಿಷ್ಟವಾದ ಪ್ರಕಟಣೆಗಳು.

<u>ಲಕ್ಷಣ</u> : 2.1.ಶಾಸನಗಳ ಎರಡು ಮುಖ್ಯ ಲಕ್ಷಣಗಳೆಂದರೆ .

1.ಅವು ಬರೆದವಲ್ಲ, ಕೊರೆದವು; ಗಟ್ಟಿ ಪದಾರ್ಥಗಳ ಮೇಲಿರತಕ್ಕವೆ ಹೊರತು ತಾಳೆಗರಿ ಭೂರ್ಜ ಪತ್ರ ಮುಂತಾದವುಗಳ ಮೇಲಿರತಕ್ಕವಲ್ಲ.

2. ಫ್ಲೀಟ್‌ರವರು ಹೇಳುವಂತೆ ಅವು ವಿಶೇಷತಃ ಸಾರ್ವಜನಿಕ ಸ್ವರೂಪವುಳ್ಳವು ಸಾರ್ವತ್ರಿಕ ಉದ್ದಿಷ್ಟವಾದವೇ ವಿನಾ ಖಾಸಗಿ ವಸ್ತುಗಳಲ್ಲ. ಶಾಸನಗಳ ಮೂಲಾರ್ಥ ಮತ್ತು ಅದರ ಆಧುನಿಕ ವ್ಯಾಪ್ತಿ ಏನೇ ಇರಲಿ ಈ ಎರಡೂ ಲಕ್ಷಣಗಳು ಮಾತ್ರ ಶಾಸನಗಳಲ್ಲಿ ಸಾರಭೂತವಾಗಿ ನಿಲ್ಲುವಂಥವು. ಬರೆದ ಕೊರೆದ ಶಾಸನಗಳಲ್ಲದೆ ಜೇಡಿಮಣ್ಣು, ಇಟ್ಟಿಗೆಗಳ ಮೇಲೆ ಮುದ್ರಿತವಾಗಿರ ತಕ್ಕವುಂಟು.

3.ಶಾಸನಗಳಿಗೆ ಸಂಬಂಧಿಸಿದಂತೆ ಯಾಜ್ಞವಲ್ಕ್ಯ ಸಂಹಿತೆಯಲ್ಲಿ ಹೀಗೆ ಉಕ್ತವಾಗಿದೆ. " ಭೂಮಿಯನ್ನು ದಾನ ಮಾಡುವಾಗಲೋ ಅಥವಾ ಯಾವುದಾದರೂ ಶಾಶ್ವತವಾದ ಏರ್ಪಟನ್ನು

ಮಾಡುವಾಗಲೋ ಅದರ ನಿಯಮಗಳನ್ನು ಮುಂದಿನ ರಾಜರ ತಿಳಿವಳಿಕೆಗಾಗಿ ವಸ್ತ್ರಪಟದ ಮೇಲಾಗಲಿ, ತಾಮ್ರಪಟದ ಮೇಲಾಗಲಿ ಬರೆಯಿಸಬೇಕು. ಅದರಲ್ಲಿ ತನಗಿಂದ ಹಿಂದಿನ ತಲೆಮಾರುಗಳ ವಿಷಯ ತನ್ನ ವಿಷಯ ದಾನವನ್ನು ಸ್ವೀಕರಿಸು ವವನ ವಿಷಯ ದಾನದ ಪ್ರಮಾಣ, ದಾನದ ಭೂಮಿಯ ಮೇರೆಗಳು ದಿನಾಂಕ ಇವುಗಳನ್ನು ನಿರೂಪಿಸಿ ತನ್ನ ಮುದ್ರೆ ಮತ್ತು ಸಹಿಗಳನ್ನು ಹಾಕಬೇಕು. ಹೀಗೆ ದಾನ ಶಾಶ್ವತವಾಗಿರುವಂತೆ ನೋಡಿಕೊಳ್ಳಬೇಕು.[3]

4.ಇದುವರೆಗೆ ನೋಡಿಸಿ ಲಕ್ಷಣಗಳ ಪ್ರಕಾರ ನಾಣ್ಯಗಳು ಶಾಸನಗಳೇ ಆದರೂ ಅವುಗಳ ಅಧ್ಯಯನ ಪ್ರತ್ಯೇಕವಾದ ಶಾಸ್ತ್ರವಾಗಿ ಪರಿಣಮಿಸಿದೆ. ಮೂಲತಃ ರಾಜಾಜ್ಞೆಗಳು ಅಥವಾ ಶಾಸನಗಳು ತಾಳೆ ಪತ್ರದ ಮೇಲಿರುತ್ತಿದ್ದುವೆಂದು ತಿಳಿದು ಬರುತ್ತದೆ ಅವುಗಳನ್ನು ಶಾಶ್ವತಗೋಳಿಸುವುದಕ್ಕಾಗಿ ತ್ರಾಮಪಟಗಳ ಮೇಲು ಕಲ್ಲಿನ ಮೇಲೂ ಕೊರೆದರು. ಹೀಗೆ ತಾಮ್ರ ಅಥವಾ ಶಿಲೆಯ ಮೇಲಿರುವ ಆಜ್ಞೆಗಳು ಮಾತ್ರ ಇಂದು ಶಾಸನಗಳೆಂದು ವ್ಯಕ್ತವಾಗುತ್ತವೆ.[4]

5. ಈ ಮಾತನ್ನು ದಾವಶಾಸನಗಳಿಗೆ ಅನ್ವಯಿಸುತ್ತವೆಂಬುದು ಸ್ಪಷ್ಟ ''ರಾಜ ಶಾಸನಗಳನ್ನು ಎಂದರೆ ರಾಜಾಜ್ಞೆಗಳನ್ನು ಪ್ರಜೆಗಳಿಗೆ ಡಂಗುರ ಹೊಡಿಸಿ ತಿಳಿಸಬೇಕೆಂದೂ, ಅವುಗಳನ್ನು ಪ್ರಜೆಗಳ ಗಮನಕ್ಕೆ ತರಲು ಅವುಗಳನ್ನು ನಾಲ್ಕು ದಾರಿಗಳು ಕೂಡುವ ಸ್ಥಳಗಳಲ್ಲಿ ಪ್ರಕಟಿಸಬೇಕೆಂದು, ಅವುಗಳನ್ನು ಮೀರಿದವರಿಗೆ ಶಿಕ್ಷೆಯನ್ನು ವಿಧಿಸಲಾಗುವುದೆಂದೂ ಶುಕ್ರ ನೀತಿಯು ತಿಳಿಸುತ್ತದೆ.[5]

ಶಾಸನ ಶಬ್ಧಕ್ಕಿರುವ ರಾಜಾಜ್ಞೆಯೆಂಬ ಮೂಲಾರ್ಥ ಕ್ರಮೇಣ ವಿಸ್ತೀರ್ಣಣವಾಯಿತೆಂದು ಗಮನಿಸಿದ್ದೇವೆ. ರಾಜ ಪ್ರಶಸ್ತಿ ಶಾಸನಗಳು, ವೀರಗಲ್ಲು ಮಾಸ್ತಿಕಲ್ಲುಗಳು, ನಿಸಿದಿಕಲ್ಲುಗಳು ಮುಂತಾದವೆಲ್ಲಾ ಈ ವಿಶಾಲಾರ್ಥದಲ್ಲ ಶಾಸನಗಳೇ ವಿನಃ ಪರಿಮಿತವಾದ ಮೂಲಾರ್ಥದಲ್ಲಿಲ್ಲ. ಮತ್ತಾವ ವಿಷಯವನ್ನು ಹೇಳದೆ ಕೇವಲ ಗುರು ಪರಂಪರೆಯನ್ನು ಹೇಳುವ ರಾಜಾವಳಿಯನ್ನು ನಿರೂಪಿಸುವ ಶಾಸನಗಳೂ ಎಂಟು. ಶಿಲೆಗಳ ಮೇಲೆ ಶುದ್ಧ ಕಾವ್ಯಗಳನ್ನು ಕೆತ್ತಿರುವ ನಿದರ್ಶನಗಳೂ ಉಂಟು. ವಿಶಾಲತಮ ಅರ್ಥದಲ್ಲಿ ಮಾತ್ರ ಇವು ಶಾಸನವರ್ಗಕ್ಕೆ ಸೇರುತ್ತವೆ. ಕಾವ್ಯ ನಾಟಕಗಳನ್ನಲ್ಲದೆ ರಾಜಾಸ್ಥಾನದ ಬಿಜೋಲಿಯ ಎಂಬಲ್ಲಿನ ಒಂದು ಬಂಡೆಯ ಮೇಲೆ ಉನ್ನತಿ ಶಿಬಿರ ಪುರಾಣೆ ಎಂಬ ದಿಗಂಬರ ಜೈನ ಕೃತಿಯೊಂದನ್ನು ಕೆತ್ತಲಾಗಿದೆ. ಮದರಾಸಿನ ಪುದುಕೋಟೆಯ ಹತ್ತಿರವಿರುವ

ಕುಡಿಮಿಯಾಮಲೈ ಎಂಬ ಬೆಟ್ಟದ ಬಂಡೆಯ ಮೇಲೆ ಕೊರೆಯಲಾಗಿರುವ ಒಂದು ಶಾಸನದ ವಿಷಯ ಪಲ್ಲವ 1ನೇ ಮಹೇಂದ್ರ ವರ್ಮನ ಸಂಗೀತದ ಅಭಿರುಚಿಯ ವಸ್ತು ವಿಷಯವನ್ನು ಒಳಗೊಂಡಿದೆ.

ಶಾಸನವು ನಾಲ್ಕು ಸಾಲಿನ ಬರಹಗಳಿರಬಹುದು ಆದರೆ ಅದಕ್ಕೆ ನಾಲ್ಕಾರು ಪುಟಗಳ ಮುನ್ನುಡಿ ಇರುತ್ತದೆ.

ಅನೇಕ ಶಾಸನಗಳು ಪ್ರಶಸ್ತಿ ಶಾಸನಗಳು ಇವು ಕವಿಗಳಿಂದ ರಚಿತವಾದವುಗಳ ಸಮುದ್ರ ಗುಪ್ತನ ಅಲಹಾಬಾದ್ ಸ್ತಂಭಶಾಸನದ ಹರಿಷೇಣನಿಂದ ಕ್ರಿ.ಶ.360ರಲ್ಲಿ ರಚನೆಯಾಯಿತು. ಶಾಂತಿವರ್ಮನ ತಾಳಗುಂದ ಶಾಸನದ ಕುಬ್ಜ, ಮಂದಸೋರ್ ಶಾಸನದ ವತ್ಸಭಟ್ಟಿ, ಇಮ್ಮಡಿ ಪುಲಿಕೇಶಿಯ, ಐಹೊಳೆ ಶಾಸನದ ರವಿ ಕೀರ್ತಿ, ಅಜ್ಞಾತ ಕರ್ತೃಕವಾದ ಕಾವ್ಯಮಯ ಶಾಸನಗಳೂ ಹಲವಾರಿವೆ. ಉದಾಹರಣೆಗೆ ಕ್ರಿ.ಶ.150ರ ರುದ್ರದಾಮನ ಗಿರ್ನಾರ್ ಶಾಸನ, ಕ್ರಿ.ಶ.ಸುಮಾರು 415ರ ಮೆರೂಲಿ ಸ್ತಂಭ ಶಾಸನ ವಿಷ್ಣುವರ್ಧನನ ಬೇಲೂರು ಶಾಸನ ಇತ್ಯಾದಿ. ಕೆಲವರು ಕವಿಗಳು ಶಾಸನಗಳಿಂದ ಮಾತ್ರ ತಿಳಿದು ಬಂದಿದ್ದಾರೆ. ಅವರು ಬರೆದಿದ್ದ ಇತರ ಕೃತಿಗಳು ನಷ್ಟವಾಗಿವೆ. ಐಹೊಳೆ ಶಾಸನದ ರವಿಕೀರ್ತಿತನ್ನ ಬಗ್ಗೆ ''ರವಿಕೀರ್ತಿಕವಿತಾಶ್ರಿತ ಕಾಳಿದಾಸ ಭಾರವಿಕೀರ್ತಿ'' ಎಂದು ಹೇಳಿಕೊಂಡಿರುವುದನ್ನು ನೆನೆಯಬಹುದು.[6]

## ಶಾಸನಗಳ ಪ್ರಕಾರಗಳು

ಶಾಸನಗಳನ್ನು ಮೂರು ಪ್ರಕಾರವಾಗಿ ವರ್ಗೀಕರಿಸಬಹುದು.

1.ಶಾಸನಗಳನ್ನು ಹಾಕಿಸಿದವರು ಯಾರು ಎಂಬ ದೃಷ್ಟಿಯಿಂದ.

2.ಶಾಸನಗಳು ಒಳಗೊಂಡಿರುವ ವಿಷಯದ ದೃಷ್ಟಿಯಿಂದ.

3.ಶಾಸನಗಳು ಕೆತ್ತಿಸಲು ಬಳಸಿರುವ ಸಾಮಾಗ್ರಿಗಳ ದೃಷ್ಟಿಯಿಂದ 3 ಪ್ರಕಾರವಾಗಿ ವಿಂಗಡಿಸಲಾಗಿದೆ.

1.ಶಾಸನಗಳನ್ನು ಹಾಕಿಸಿದವರು ಯಾರು ಎಂಬುದರ

ಆಧಾರದ ಮೇಲೆ ಅವುಗಳನ್ನು ಎರಡು ಸ್ಥೂಲ ವರ್ಗಗಳಾಗಿ ವಿಂಗಡಿಸಬಹುದು.

1.ರಾಜನಿಂದ ಹೊರಡಿಸದ ಶಾಸನಗಳು.

## 2. ಖಾಸಗಿ ವ್ಯಕ್ತಿ ಅಥವಾ ಸಂಸ್ಥೆ ಯ ಪರವಾದ ಶಾಸನಗಳು

ರಾಜನಾಗಲಿ ಅವನ ಪರವಾಗಿ ಇತರರಾಗಲಿ ಅಂದರೆ ಮಾಂಡಲಿಕರಾಗಲೀ ಮತ್ತು ಉನ್ನತಾಧಿಕಾರಿಗಳು ಕೆತ್ತಿಸಿದ ಶಾಸನಗಳು ಬಹುಮುಖ್ಯವಾದವು. ದಾನ ಶಾಸನಗಳನ್ನು ಸಂಕೀರ್ಣಶಾಸನಗಳೆಂದು ಹೇಳಬಹುದು.

ಖಾಸಗಿ ವ್ಯಕ್ತಿ ಅಥವಾ ಸಂಸ್ಥೆಯ ಪರವಾಗಿ ಹಾಕಿಸಿದ ಬಹುಪಾಲು ಶಾಸನಗಳು ದಾನ ಶಾಸನವಾಗಿವೆ . ದೇವಾಲಯಕ್ಕೆ ದಾನ ಕೊಟ್ಟಿದ ವಿಚಾರವನ್ನು ವಿಗ್ರಹ ಪ್ರತಿ ಷ್ಠಾಪನೆ ಮಾಡಿದ ವಿಚಾರವನ್ನುಅವು ಹೇಳುತ್ತವೆ. ದಾನ ನೀಡಿದ ಅಥವಾ ಪ್ರತಿಷ್ಠಾಪಿಸಿದ ವಸ್ತುಗಳ ಮೇಲೆ ಇಂಥ ಶಾಸನಗಳನ್ನು ಕಾಣಬಹುದು. ಇವು ಸಾಮಾನ್ಯವಾಗಿ ದೀರ್ಘವಾಗಿರುವುದಿಲ್ಲ. ಕೆಲವೊಮ್ಮೆ ಅವು ಯಾರ ಕಾಲದಲ್ಲೇ ದಾನ ಅಥವಾ ಪ್ರತಿಷ್ಠಾಪನೆ ನಡೆಯಿತ್ತೆಂಬುದನ್ನೂ ತಿಳಿಸುತ್ತವೆ. ಭುವನೇಶ್ವರ ದ್ರಾಕ್ಷಾರಾಮ, ಸಿಂಹಾಚಿನ,, ಶ್ರೀರಂಗ, ಕಂಚೀಪುರ ಮುಂತಾದ ದೇವಾಲಯಗಳ ಗೋಡೆಗಳ ಮೇಲೆ ಹಲವು ಶಾಸನಗಳಿವೆ. ಯಾತ್ರಿಕರು ಸ್ವಪ್ರಶಸ್ತಿಗಳನ್ನು ಬರೆದು ತಂದು ದೇವಾಲಯದ ಗೋಡೆಗಳ ಮೇಲೆ ಕೆತ್ತಿರುವುದು ಉಂಟು.

ಖಾಸಗಿ ವ್ಯಕ್ತಿ ಅಥವಾ ಸಂಸ್ಥೆ ಕೆರೆಯನ್ನು ದೇವಾಲಯವನ್ನು ನಿರ್ಮಿಸಿದಾಗ ಪ್ರಶಸ್ತಿಗಳನ್ನು ಶಿಲಾ ಪಟ್ಟಿಕೆಗಳ ಮೇಲೆ ಅಥವಾ ಸ್ತಂಭಗಳ ಮೇಲೆ ಕೆತ್ತಿರುವ ನಿದರ್ಶನಗಳಿವೆ. ಖಾಸಗಿ ವ್ಯಕ್ತಿಗಳು ಅಥವಾ ಅದಿಕಾರಿಗಳು ಹಾಕಿಸಿದ ಇಂತಹ ಶಾಸನಗಳಲ್ಲೂ ಸಾಮಾನ್ಯವಾಗಿ ರಾಜನ ಹೆಸರಿರುವ ಉಲ್ಲೇಖ ವಿರುತ್ತದೆ. ಉದಾಹರಣೆಗ್ಗೆ ಹೊಳಲು ಶಾಸನದಲ್ಲಿ ವಿಜಯನಗರದ ಬುಕ್ಕ ಮತ್ತು ಒಡೆಯನ ಹೆಸರು ಉಲ್ಲೇಖವಿದೆ.[7]

ಆದ್ದರಿಂದ ಖಾಸಗಿ ಶಾಸನಗಳು ಚಾರಿತ್ರಿಕ ದೃಷ್ಟಿಯಿಂದ ಅಮೂಲ್ಯವಾಗಿದೆ. ದಕ್ಷಿಣ ಭಾರತದಲ್ಲಿ ಕ್ರಿ.ಶ.10ನೇ ಶತಮಾನದ ಸ್ಥಳೀಯ ಗ್ರಾಮಾಡಳಿತದ ಮೇಲೆ ಬೆಳಕು ಚೆಲ್ಲುವ ಉತ್ತರ ಮೆರೂರು ಶಾಸನಗಳು ವೀರಗಲ್ಲು, ನಿಶಧಿಗಲ್ಲು, ಮಾಸ್ತಿಗಲ್ಲುಗಳೂ ಈ ವರ್ಗದವೇ ಆಗಿವೆ.

ವಿಷಯದ ದೃಷ್ಟಿಯಿಂದ ಶಾಸನಗಳನ್ನು ಪ್ರಶಸ್ತಿ ಶಾಸನಗಳು ಮತ್ತು ದಾನ ಶಾಸನಗಳು ಎಂದು ಎರಡು ಪ್ರಮುಖ ವರ್ಗಗಳನ್ನಾಗಿ ಮಾಡಬಹುದು. ಖಾಸಗಿ ಶಾಸನಗಳಾದ ವೀರಗಲ್ಲು, ನಿಸಿದಿಗಲ್ಲು,

ಮಾಸ್ತಿಕಲ್ಲುಗಳೂ ಒಂದು ಬಗೆಯ ಪ್ರಶಸ್ತಿ ಶಾಸನಗಳೇ ಪ್ರಶಸ್ತಿ ಶಾಸನ ಹಾಗೂ ದಾನಶಾಸನಗಳು ವಿಭಿನ್ನ ವರ್ಗವಾದರೂ ರಾಜರ ದಾನ ಶಾಸನಗಳಲ್ಲಿ ಪ್ರಶಸ್ತಿಯು ಅಂಶ ಇತ್ತೀಚೆಗೆ ಸೇರಿಕೊಂಡಿತೆಂಬುದು ಲಕ್ಷಿಸಬೇಕಾದ ಸಂಗತಿ. ಮೊದ-ಮೊದಲು ಪ್ರಶಸ್ತಿಯು ವಿಶೇಷವಾಗಿ ಶಿಲೆಯ ಮೇಲೆ ಬಂಡೆಗಳು, ಪಟ್ಟಿಕೆಗಳು ಮತ್ತು ಸ್ತಂಭಗಳ ಮೇಲೆ ಕಂಡು ಬರುತ್ತದೆ. ಕಾಲಕ್ರಮದಲ್ಲಿ ಅದು ತಾಮ್ರಪಟಗಳ ಮೇಲಿನ ದಾನಶಾಸನಗಳಲ್ಲೂ ಸ್ಥಾನ ಪಡೆದುಕೊಂಡಿತು. ದಾನಿಯ ಮತ್ತು ಅವನ ಪೂರ್ವಜರ ಹೊಗಳಿಕೆಯ ರೂಪದಲ್ಲಿ ಕೇವಲ ಪ್ರಶಸ್ತಿಯನ್ನೊಳಗೊಂಡ ತಾಮ್ರಪಟಗಳೂ ಸಿಕ್ಕಿವೆ.

ಶಾಸನಗಳನ್ನು ಶಿಲಾ ಶಾಸನಗಳಲ್ಲಿ ಮತ್ತು ತಾಮ್ರ ಶಾಸನಗಳು ಎಂದು ಎರಡು ವಿಧಗಳುಂಟು. ಶಿಲಾ ಶಾಸನಗಳನ್ನು ಮತ್ತೆ ಸ್ತಂಭ ಶಾಸನಗಳು, ಬಂಡೆ ಶಾಸನಗಳು ಎಂದು ಎರಡು ಪ್ರಮುಖ ವರ್ಗಗಳಾಗುತ್ತವೆ. ಅಶೋಕನ ಕೆಲಸವು ಶಾಸನಗಳು, ಸಮುದ್ರಗುಪ್ತನ ಅಲಹಾಬಾದ್ ಶಾಸನ, ಮಾಳವದ ಮಂಡಸೋರದಲ್ಲಿರುವ ಯಶೋಧರ್ಮನ ಶಾಸನ ಸ್ತಂಭ ಶಾಸನಗಳಿಗೆ ಉದಾಹರಣೆ.

ಶಿಲಾ ಪಟ್ಟಿಕೆಗಳು, ದೇವಾಲಯಗಳ ಮತ್ತಿತರ ಕಟ್ಟಡಗಳ ಗೋಡೆ ಕಂಬ ಮುಂತಾದ ಭಾಗಗಳು, ವಿಗ್ರಹ ಪೀಠಗಳು, ಆಭರಣಗಳು, ಆಯುಧಗಳು, ದೇವಸೋಪಕರಣಗಳು, ಅವಶೇಷ ಕರಂಡಗಳು, ಪಾತ್ರೆಗಳು, ಕುಂಭಗಳು, ಚಿಪ್ಪುಗಳು, ದಂತಫಲಕ, ಹರಳು ಮುಂತಾದ ವಸ್ತುಗಳ ಮೇಲೆಲ್ಲಾ ಶಾಸನಗಳು ದೊರೆತಿವೆ. ಮರದ ಪಟ್ಟಿಕೆಗಳ ಮೇಲೆ ಮಸಿಯಲ್ಲಿ ಬರೆದವೂ ಜೇಡಿಮಣ್ಣು, ಇಟ್ಟಿಗೆಗಳ ಮೇಲೆ ಮುದ್ರಿತವಾದವೂ ಉಂಟು. ವಿಶೇಷತಃ ಕರ್ನಾಟಕದಲ್ಲಿ ಶಿಲೆ, ಸ್ತಂಭಗಳು, ದೇವಸ್ಥಾನಗಳ ಗೋಡೆಗಳು, ವಿಗ್ರಹಗಳ ಪೀಠಗಳು, ಪಾತ್ರೆಗಳು, ತಾಮ್ರ ಪಟಗಳು ಇವುಗಳ ಮೇಲೆ ಶಾಸನಗಳು ಕಂಡು ಬಂದಿವೆ. ಇತ್ತೀಚೆಗೆ ಕೋಲಾರದ ಹತ್ತಿರ ಮಡಕೆಯ ಮೇಲೆ ಶಾಸನವೊಂದು ಸಿಕ್ಕಿದೆ.

### 1. ಜೆ.ಎಫ್. ಫ್ಲೀಟರ ಶಾಸನಗಳ ವರ್ಗೀಕರಣ :

ಜೆ.ಎಫ್.ಫ್ಲೀಟರ್ ಶಾಸನಗಳ ವರ್ಗೀಕರಣದಂತೆ 1.ಕೇವಲ ಘಟನೆಗಳನ್ನು ನಿರೂಪಿಸುವ ಶಾಸನಗಳು ಭಾರತೀಯರ ಐತಿಹಾಸಿಕ ಪ್ರವೃತ್ತಿಯನ್ನು ಗಣನೀಯವಾಗಿ ದ್ಯೋತಿಸುತ್ತದೆ. ಸಮುದ್ರಗುಪ್ತನ ಅಲಹಾಬಾದ್ ಶಾಸನ, ಯಶೋಧರ್ಮನ ಮಂದಲೋರ್ ಶಾಸನ, ಇಮ್ಮಡಿಯ ಐಹೊಳೆ ಶಾಸನ ಮುಂತಾದ ಪ್ರಶಸ್ತಿ ಶಾಸನಗಳನ್ನು ಈ ವರ್ಗದಲ್ಲಿ ಹೆಸರಿಸಬಹುದು. ದಿಗ್ವಿಜಯ

ವರ್ಣನೆಯ ಅವುಗಳ ಮೂಲೋದ್ದೇಶಿವಾಗಿದ್ದರೂ ಅವು ಯಾವುದೋ ಧಾರ್ಮಿಕ ಸಂದರ್ಭದಲ್ಲಿ ರಚಿತವಾಗಿದ್ದಿರಬೇಕೆಂಬ ಊಹೆಗೆ ಅವಕಾಶವಿದೆ. ಉದಾಹರಣೆಗೆ ಐಹೊಳೆ ಶಾಸನ ಪುಲಿಕೇಶಿಯ ರಾಜಕೀಯ ಸಾಧನೆಗಳ ನಿರೂಪಣೆಯಾಗಿದ್ದರೂ ರವಿಕೀರ್ತಿ ಐಹೊಳೆಯಲ್ಲಿ ಜನಾಲಯವನ್ನು ಕಟ್ಟಿಸಿದ್ದು, ಅದರ ರಚನೆಯ ಹಿನ್ನೆಲೆ ಈ ಮಾರ್ಗದಲ್ಲಿ ಶುದ್ಧ ಚಾರಿತ್ರಿಕ ನಿರೂಪಣೆಯು ಒಂದು ಅತ್ಯುತ್ತಮ ನಿದರ್ಶನವೆಂದರೆ ಕಳಿಂಗದ ಖಾರವೇಲನ ಹಾಥಿಗುಂಥ ಶಾಸನ. ಅದು ಅವನ ಜೀವನ ವೃತ್ತಾಂತವನ್ನು ಅವನ ಆಳ್ವಿಕೆಯ ಹದಿಮೂರನೇ ವರ್ಷದವರೆಗೆ ತಿಳಿಸಿಕೊಡುತ್ತದೆ. ಯುದ್ಧದಲ್ಲಿ ಹೋರಾಡಿ ಮಡಿದ ವೀರರ ಶೌರ್ಯವನ್ನು ಹೇಳುವ ಸ್ಮಾರಕ ಸ್ತಂಭಗಳೂ ವೀರಗಲ್ಲುಗಳೂ ಅಂತೆಯೇ ಸ್ತ್ರೀಯರ ಸಹಗಮನ ಅನುಗಮನಗಳನ್ನು ಹೇಳುವ ಮಾಸ್ತಿ ಕಲ್ಲುಗಳೂ ಇದೇ ವರ್ಗಕ್ಕೆ ಸೇರುತ್ತವೆ. ತುರುಕಾಳಗದಲ್ಲಿ ಹೋರಾಡಿ ಮಡಿದ ಮಾಚ, ಗೋಮರನ್ನು ಪ್ರಶಂಸಿಸುವ ಅಬ್ಬವಾರು ಶಾಸನ ಬೆಳೆತೂರು ಶಾಸನ ಮುಖ್ಯವಾದವು. ಬೋಳವಾಣಿ, ಮೇಳವಾಣಿ, ಲೆಂಕವಾಣಿ ಮುಂತಾದ ಆತ್ಮಬಲಿಯ ಪ್ರಕಾರಗಳಿಗೆ ಸಂಬಂಧಿಸಿದ ಶಾಸನಗಳೂ ಈ ವರ್ಗದಲ್ಲಿ ಸೇರುತ್ತವೆ.[8]

## 2. ಧಾರ್ಮಿಕ ಉದ್ದೇಶಯುಳ್ಳ ಶಾಸನಗಳು :

ಅಶೋಕನ ಶಾಸನಗಳು ಈ ವರ್ಗದಲ್ಲಿ ಅಗ್ರಸ್ಥಾನ ಪಡೆಯುತ್ತವೆ. ಭರತ ಖಂಡದಾದ್ಯಂತ ಹರಡಿಕೊಂಡಿರುವ ಅಶೋಕನ ಸುಪ್ರಸಿದ್ಧ ಪುಸ್ತರ ಮತ್ತು ಸ್ತಂಭ ಶಾಸನಗಳು ಧರ್ಮ ಪ್ರಸಾರಕ್ಕಾಗಿಯೇ ಸ್ಥಾಪಿತವಾದಂತಹವುಗಳಾಗಿವೆ. ಅಶೋಕನ ಶಾಸನಗಳು ತಮ್ಮನ್ನು ಧರ್ಮಲಿಪಿಗಳೆಂದು ಕರೆದುಕೊಂಡಿವೆ. ಇವು ಅವನ ಆಡಳಿತ ಕ್ರಮವನ್ನು ವಿವರಿಸುತ್ತದೆ.ಬುದ್ಧ ಹುಟ್ಟಿದ ಜಾಗದಲ್ಲಿ ಅವನ ಸ್ಮೃತಿಯನ್ನು ಗೌರವಿಸುವುದಕ್ಕಾಗಿ ಸಿದ್ದವಾದದ್ದು, ಅಶೋಕನ ರುಮ್ಮಿಂದೈ ಸ್ತಂಭಶಾಸನ ಲುಂಬಿಣಿ ಗ್ರಾಮಕ್ಕೆ ಕೆಲವು ತೆರಿಗೆಗಳನ್ನು ಅಶೋಕ ತಪ್ಪಿಸಿದನೆಂದು ಆ ಶಾಸನದಲ್ಲಿ ಹೇಳಿದೆ.

## 3. ಧಾರ್ಮಿಕ ದತ್ತಿಗಳನ್ನು ಹೇಳುವ ಶಾಸನಗಳು :

ದೇವತೆಗಳಿಗೆ, ದೇವಾಲಯಗಳ ಪರಮಾಗಿ ಅರ್ಚಕರಿಗೆ ಸಂಘ ಸಂಸ್ಥೆಗಳಿಗೆ ನೀಡಿದ ದತ್ತಿಗಳನ್ನೂ ದಾನಗಳನ್ನೂ ಹೇಳುವ ಶಾಸನಗಳನ್ನು ಈ ವರ್ಗ ದಲ್ಲಿ ಅಳವಡಿಸಲಾಗಿದೆ. ಆತಕೂರು ಶಾಸನದ

ಮುಖ್ಯ ದಾಖಲೆ ಶಿವಾಲಯಕ್ಕೆ ಮಾಡಲಾದ ಭೂದಾನವನ್ನು ಉಲ್ಲೇಖಿಸುತ್ತದೆ. ಭಾಸ್ಕರ ರವಿವರ್ಮನ ಕೊಚಿನ್ ಶಾಸನದಲ್ಲಿ ಯಹೂದ್ಯರಿಗೆ ಗ್ರಾಮವೊಂದರ ನೀಡಿಕೆ ಬಗ್ಗೆ ತಿಳಿಸುತ್ತದೆ. ಏಕಾಂತದ ರಾಮಯ್ಯ ತಾನು ಕಟ್ಟಿಸಿದ ದೇವಾಲಯಗಳಿಗೆ ಕೊಟ್ಟ ಗ್ರಾಮಗಳನ್ನು ಹೆಸರಿಸುತ್ತದೆ. ಅಬ್ಬಲೂರು ಶಾಸನ ಕ್ರಿ.ಶ.1200 ವಿಷ್ಣುವರ್ಧನನ ಬೇಲೂರು ಶಾಸನವು ದೇವಾಲಯಕ್ಕೆ ದತ್ತಿಬಿಟ್ಟದ್ದನು ತಿಳಿಸುತ್ತದೆ.

## 4. ಲೌಕಿಕ ದಾನಗಳನ್ನು ಹೇಳುವ ಶಾಸನಗಳು :

ಖಾಸಗಿ ವೈಕ್ತಿಗಳಿಗೆ ನೀಡಿದ ಲೌಕಿಕ ದಾನಗಳನ್ನು ದಾಖಲು ಮಾಡುವ ಶಾಸನಗಳು ಈ ವರ್ಗದಲ್ಲಿ ಬರುತ್ತವೆ. ರಾಷ್ಟ್ರಕೂಟ ದೊರೆ 1ನೇ ಅಮೋಘವರ್ಷ, ಬೆಣ್ಣೆಯ ಅಥವಾ ತುಪ್ಪದ ಮೇಲಿನ ತೆರಿಗೆ ಗ್ರಾಮದ ಮಹಾ ಜನರಿಗೆ ಸಲ್ಲಿಸಬೇಕೆಂದು ಆಜ್ಞೆ ಹೊರಡಿಸಿದ್ದನ್ನು ದಾಖಲು ಮಾಡುತ್ತದೆ.ಈ ತೆರನಾದ ಲೌಕಿಕ ದಾನಗಳಿಗೆ ಸಂಬಂಧಿಸಿದಂತೆ ಯೋಜನ ಕತ್ತಿಯನ್ನು ತೊಳೆಯುವ ವಿಧಿ ಆಚರಣೆಯಲ್ಲಿತ್ತೆಂದು ತಿಳಿದು ಬರುತ್ತದೆ.

ಶಾಸನ ಸಾಮಾಗ್ರಿಗಳು : ಶಾಸನ ಸಾಮಾಗ್ರಿಗಳು ಶಿಲಾಶಾಸನ ಲೋಹಗಳು ಶಿಲೆ ಮಣ್ಣಿನ ವಸ್ತುಗಳು ಮತ್ತು ಇತರೆ ಪದಾರ್ಥಗಳು ಎಂದು ವಿಂಗಡಿಸಬಹುದು.

### ಲೋಹ ಲೋಹಗಳು:

ಎ.ತಾಮ್ರ: ತಾಮ್ರದ ಹಲಗೆಯ ಮೇಲೆ ಕೆತ್ತಿದಂತಹ ಬರವಣಿಗೆ ಮುಖ್ಯವಾಗಿ ರಾಜರು ಮತ್ತು ಸಾಮಂತರು ಕೊಟ್ಟ ದಾನಗಳನ್ನು ಹೇಳುವ ಶಾಸನಗಳು ತಾಮ್ರ ಪಟಗಳ ಮೇಲೆ ಕಂಡು ಬರುತ್ತದೆ. ತಾಮ್ರ ಪಟಗಳ ಮೇಲೆ ದಾನಶಾಸನಗಳನ್ನು ಹೊರಡಿಸುವ ಪದ್ಧತಿ ಬಹಳ ಪ್ರಾಚೀನವಾದುದು.

ತಾಮ್ರ ಪಟಗಳ ಆಕಾರ ಮುಖ್ಯವಾಗಿ ಕರಡು ಪ್ರತಿಗಳ ಆಕಾರವನ್ನು ಅವಲಂಬಿಸುತ್ತಿತ್ತು. ಪ್ರಶಸ್ತಿಯ ಅಂಶ ಹೆಚ್ಚಿದಷ್ಟೂ ತಾಮ್ರ ಪಟಗಳ ಆಕಾರ ವಿಸ್ತರಿಸುತ್ತಿತ್ತು. ಸಾಮಾನ್ಯವಾಗಿ ತಾಮ್ರ ಪಟಗಳೆಂದು ಧೀರ್ಘಚತುರ್ರಕಾರ ವಾಗಿದೆ.ತಾಮ್ರ ಶಾಸನಗಳು ಹಕ್ಕಿನ ಪತ್ರಗಳಾಗಿದ್ದು, ವೈಯಕ್ತಿಕ ವಶಕ್ಕೆ ಹೋಗುತ್ತಿದ್ದುದರಿಂದ ಸ್ಥಿರವಾದ ಶಿಲಾ ಶಾಸನಗಳಂತಲ್ಲದೆ ಕಾಲಾಂತರ ಹಸ್ತಾಂತರಗೊಂಡು ತಮ್ಮ ಮೂಲ ಸ್ಥಾನಗಳಿಂದ ದೂರಸಾಗಿಸುವುದಕ್ಕೆ ಸಹಾಯಕವಾಗುತ್ತಿದ್ದವು.[9]

**ಸಿ. ಚಿನ್ನ ಬೆಳ್ಳಿಯ :** ಶ್ರೀಮಂತ ವರ್ತಕರ, ದೊರೆಗಳ ದಾಖಲೆಗಳು ಸುವರ್ಣಫಲಕಗಳ ಮೇಲಿರುತ್ತಿದ್ದವೆಂಬುದಕ್ಕೆ ಬೌದ್ಧ ಸಾಹಿತ್ಯದಲ್ಲಿ ಆಧಾರವಿದೆ.

**ಡಿ. ಕಂಚು:** ಮಣಿಯಾಲದಲ್ಲಿ ಒಂದು ಶಾಸನಯುಕ್ತ ಕಂಚಿನ ಕರಂಡಕ ದೊರೆತಿದೆ.

**ಇ. ಹಿತ್ತಾಳೆ :** ವರ್ದಕದಲ್ಲಿರುವ ಸ್ತೂಪವೊಂದರಲ್ಲಿ ಹಿತ್ತಾಳೆಯ ಒಂದು ಅವಶೇಷ ಕಲಶದ ಮೇಲೆ ಶಾಸನವಿದೆ.

ಎಫ್. ಹಿಂದಿನ ಶಾಸನಗಳನ್ನು ಅಳಿಸಿ ಮುಂದಿನವರು ಹೊಸ ಶಾಸನಗಳನ್ನು ಬರೆಯಿಸಿರುವುದುಂಟು. ಒಂದು ಶಾಸನದಲ್ಲಿ ಹೇಳಿರುವ ದತ್ತಿಯು ನಿಂತು ಹೋಗಿ ಅದು ವೈರ್ಥವಾದಾಂಗ ಅಥವಾ ಪ್ರಾಬಲ್ಯಕ್ಕೆ ಬಂದ ಒಂದು ಧರ್ಮದವರು ಇನ್ನೊಂದು ಧರ್ಮದ ಶಾಸನಗಳನ್ನು ಹಾಳು ಮಾಡಬೇಕೆಂದು ಪ್ರಯತ್ನಪಟ್ಟಾಗ ಈ ಅಳಿಸುವ ಕಾರ್ಯಗಳು ನಡೆದಿರಬಹುದು.

## ಶಾಸನಗಳಲ್ಲಿ ವಿಷಯ ಕ್ರಮ :

ಇತರೆ ರಚನೆಗಳಂತೆ ಶಾಸನಗಳೂ ಸಾಮಾನ್ಯವಾಗಿ ಮಂಗಳದಿಂದ ಮೊದಲಾಗುತ್ತದೆ. ಅನೇಕ ಪ್ರಾಚೀನ ಶಾಸನಗಳ ಆರಂಭದಲ್ಲಿ ಸಿದ್ಧಂ ಎಂಬ ಮಂಗಳ ವಾಚಕ ಪ್ರಯುಕ್ತ ವಾಗಿದೆ. ಸಿದ್ಧಿರಸ್ತು ಎಂದು ಇದರ ಅರ್ಥ ಸ್ವಸ್ತಿ ಎಂಬ ಬಳಕೆಯು ಉಂಟು. ಆ ಚಿಹ್ನದ ತರುವಾಯ ಸ್ವಸ್ತಿ ಶಬ್ಧವೂ ಒಮ್ಮೊಮ್ಮೆ ಬರತೊಡಗಿತು. ಸಿದ್ಧಂ ಚಿಹ್ನೆ ಮತ್ತು ಪ್ರಾರ್ಥನಾ ಭಾಗಗಳ ಜೊತೆಗೆ ಮಧ್ಯಾಕಾಲೀನ ಶಾಸನಗಳ ಆರಂಭದಲ್ಲಿ 'ಓಂ' ಎಂಬುದು ಕೂಡ ಕಾಣಿಸಿಕೊಳ್ಳುವುದುಂಟು.[10]

ಕಾಲಕ್ರಮದಲ್ಲಿ 'ಮಂಗಳ' ಹೆಚ್ಚು ಹೆಚ್ಚು ವಿಸ್ತೃತವಾಯಿತು. ಕೇವಲ ಸಂಕೇತಗಳ ಮತ್ತು ಶಬ್ಧಗಳ ರೂಪದಲ್ಲಿದ್ದುದು ಸುಧೀರ್ಘವಾದ ಗದ್ಯಪದ್ಯಾತ್ಮಕ ದೇವತಾಸ್ತೋತ್ರಗಳ ರೂಪವನ್ನು ತಳೆಯಿತು. ಸಾಮಾನ್ಯವಾಗಿ ಶಾಸನದ ಮಂಗಳ ಮಧ್ಯದಾನಿಯ ಮನೆದೇವತೆಯನ್ನು ಕುರಿತದ್ದಾಗಿರುತ್ತದೆ. ಆದರೆ ಬನವರಿಸಿಯ ಕದಂಬರ ಶಾಸನಗಳಲ್ಲಿ ಒಬ್ಬನೇ ರಾಜ ವಿವಿಧ ಶಾಸನಗಳಲ್ಲಿ ವಿವಿಧ ದೇವತೆಯನ್ನು ಸ್ತುತಿಸಿದ್ದಾನೆ. ಇದು ದೊರೆಯ ಉದಾರ ಮನೋಧರ್ಮವನ್ನು ತಿಳಿಸುತ್ತದೆ.

ಕನ್ನಡ ಶಾಸನಗಳ ಆರಂಭದಲ್ಲಿ ಬರುವ ಪ್ರಾರ್ಥನಾ ಪದ್ಯಗಳು ಸಾಮಾನ್ಯವಾಗಿ

ಸಂಸ್ಕೃತದಲ್ಲಿರುತ್ತವೆ. ಹಲ್ಮಡಿ ಶಾಸನದ ಹೊರತು ಪ್ರಾಚೀನ ಕನ್ನಡ ಶಿಲಾಶಾಸನಗಳಲ್ಲಿ ಪ್ರಾರ್ಥನಾ ಶ್ಲೋಕ ಕಂಡುಬರುವುದಿಲ್ಲ. ಅವುಗಳ ಮೊದಲಲ್ಲಿ ಸ್ವಸ್ತಿ, ಸ್ವಸ್ತಿಶ್ರೀ, ಶ್ರೀ ಸಿದ್ಧಂ ಮುಂತಾದ ಮಂಗಳವಾಚಕಗಳಷ್ಟೆ ಬರುತ್ತವೆ ಬರುದಿರುವುದೂ ಉಂಟು. ಪ್ರಾರ್ಥನಾ ಶ್ಲೋಕಗಳು ಹೆಚ್ಚು ಹೆಚ್ಚಾಗಿ ವೈವಿಧ್ಯ ಪೂರ್ಣವಾಗಿ ಗೋಚರಿಸ ತೊಡಗಿದ್ದು, ಸು:08-09ನೇ ಶತಮಾನದ ಶಿಲಾಶಾಸನಗಳಲ್ಲಿ.

ಶೈವ ಶಾಸನಗಳಾದರೆ ಶಿವಸ್ತುತಿಯಿಂದಲೂ ವೈಷ್ಣವ ಶಾಸನಗಳಾದ ವಿಷ್ಣುಸ್ತುತಿಗಳಿಂದಲ್ಲೂ ಜೈವ ಶಾಸನಗಳಾದರೆ ಜೀವಸ್ತುತಿಯಿಂದಲ್ಲೂ ಮೊದಲಾಗುತ್ತದೆ. ವಿಷ್ಣು, ಸ್ತುತಿ ಪದ್ಯದಿಂದ ಪ್ರಾರಂಭವಾಗುತ್ತದೆ.''ಜಯತ್ಯಾ ವಿಷ್ಣ್ಣುಂ ವಿಷ್ಣೋರ್ವಾರಾಹಂ'' ''ಶೈವ ಶಾಸನಗಳಲ್ಲಿ ಆಡಿಯಲ್ಲಿ'' ನಮಸ್ತುಂಗ ಶಿರಶ್ಚುಂಬಿ ಎಂಬ ಶ್ಲೋಕ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಒಟ್ಟಿಗೆ ಹೊಗಳಾದ ಅನೇಕ ಶ್ಲೋಕಗಳಿದ್ದರೂ ಬ್ರಹ್ಮವನ್ನು ಪ್ರತ್ಯೇಕವಾಗಿಸುತ್ತಿಸುವ ಮಂಗಳ ಶ್ಲೋಕ ಎಲ್ಲೂ ಬರುವಂತೆ ತೋರುವುದಿಲ್ಲ.

ಪ್ರಾಚೀನ ಜೈನ ಶಾಸನಗಳ ಆದಿಯಲ್ಲಿ ''ಭದ್ರ ಮಸ್ತು ಜಿನಶಾಸನಾಯ'' ಎಂದು ಮಾತ್ರ ಇದ್ದರೆ ಸು 600ರ ಜೈನ ಶಾಸನಗಳಲ್ಲಿ ಪ್ರಾರ್ಥನಾ ಶ್ಲೋಕಗಳು ಕಾಣಿಸಿಕೊಳ್ಳುತೊಡಗುತ್ತವೆ. ಶಾಸನವನ್ನು ಹೊರಡಿಸಿದ ಸ್ಥಳದ ಹೆಸರು ಒಮ್ಮೊಮ್ಮೆ ಮಂಗಳದ ಬಳಿಕ ಉಕ್ತವಾಗುವುದುಂಟು ದಾನಿಯ ಹೆಸರಿನ ಹಿಂದೆ ಅಥವಾ ಮುಂದೆ ಬರಲುಬಹುದು. ಮೊದ-ಮೊದಲಿನ ಶಾಸನಗಳಲ್ಲಿ ರಾಜದಾನಿಯ ಅಥವಾ ಬೀಡಿನ ಹೆಸರು ಮಾತ್ರ ಉಲ್ಲೇಖಿಗೊಂಡಿದ್ದರೆ, ಈ ಚಿನ್ನ ಶಾಸನಗಳಲ್ಲಿ ಅದರ ವಿಸ್ತೃತ ವರ್ಣನೆ ಕಂಡು ಬರುವುದುಂಟು. ದಾನಕ್ಕೆ ಸಂಬಂಧಿಸಿದ ಆಜ್ಞೆ ದಾನಿಯ ಕೈಕೆಳಗಿನವರನ್ನು, ಅಧಿಕಾರಗಳನ್ನು ಮತ್ತು ದಾನವಿತ್ತ ಭೂಮಿಯ ಅಥವಾ ಗ್ರಾಮದ ಪರಿಸರದಲ್ಲಿ ವಾಸಿಸುವ ಜನರನ್ನು ಉದ್ದೇಶಿಸುತ್ತದೆ.

ಆಜ್ಞೆಗೆ ಮೊದಲು ದೊರೆ ಸಂಬಂಧ ಪಟ್ಟವರ ಕುಶಲವನ್ನು ಕೇಳುತ್ತಾನೆ. ಆಜ್ಞೆಯನ್ನು ಹೇಳುವ ಶಬ್ಧಗಳೆಂದರೆ ಸಾಮಾನ್ಯವಾಗಿ 'ಸಮಾದಿಶು' ಅಥವಾ 'ಆದಿಶತಿ', ಕುಶಲಯಲ್ಲಿ ಎಂಬ ಶಬ್ದಗಳು ಸೇರುವುದುಂಟು ಹಾಗೆ ವರ್ಣಿಸಬೇಕೆಂದು ಕಾನೂನಿನ ನಿಯಮವೇ ಇದ್ದಿತು. ದಾನ ಕೊಟ್ಟಾಗ ದಾನಿ ಸಂಪೂರ್ಣವಾಗಿ ಸ್ವಸ್ಥ ಚಿತ್ತನೂ ಆರೋಗಿಯೂ ಆಗಿದ್ದಾಗ ಮಾತ್ರ ದಾಖಲೆ ಊರ್ಜಿತ ಮತ್ತು

ಪ್ರಶ್ನಾತೀತವೆಂದೂ ಇದರ ಅಭಿಪ್ರಾಯ.

ಸಾಮಾನ್ಯವಾಗಿ ದೊರೆಗಳು ಒಂದು ಜಮೀನನ್ನು ಅಥವಾ ಒಂದು ಗ್ರಾಮವನ್ನು ಅಥವಾ ಅನೇಕ ಗ್ರಾಮವನ್ನು ದಾನವಾಗಿ ಕೊಟ್ಟಾಗ ದಾನದ ಭೂಮಿ ಎಲ್ಲದೆ ಎಂಬುದನ್ನು ನಮೂದಿಸಲಾಗುತ್ತದೆ. ಭೂಮಿಯ ಪ್ರಮಾಣವನ್ನು ನಿರ್ದಿಷ್ಟ ಅಳತೆಕೋಲಿನಿಂದ ಸೂಚಿಸಿರುವುದುಂಟು.

ದೊರೆಗಳಿಂದ ಅವರ ತಂದೆ ತಾತ, ಮುತ್ತಾತಂದಿರ ಹೆಸರುಗೊತ್ರ, ವೇದ ಶಾಖೇಗಳು ಉಕ್ತವಾಗುತ್ತಿದೆ. ದಾನ ಪಡೆದವರು ಒಬ್ಬರಿರಬಹುದು ಅಥವಾ ಹಲವರಿರಬಹುದು ಅದನ್ನು ಸ್ಪಷ್ಟಪಡಿಸಿತ್ತು.ದೇವಾಲಯದಂಥ ಧಾರ್ಮಿಕ ಸಂಸ್ಥೆಗೆ ದತ್ತಿ ಕೊಟ್ಟಾಗ ದೇವತೆಯ ಹೆಸರು ಉಕ್ತವಾಗಿರುತ್ತದೆ. ಕೆಲವೊಮ್ಮೆ ಪುರೋಹಿತರ ಹೆಸರು ಸೇರಿರುತ್ತದೆ. ಪುಣ್ಯಾರ್ಜನೆಯೇ ದಾನ ಕೊಡುವುದರ ಉದ್ದೇಶವಾಗಿ ಬಹುವಾಲು ದಾನಗಳನ್ನು ಸಂಕ್ರಾಂತಿ, ಸೂರ್ಯಗ್ರಹಣ, ಚಂದ್ರಗ್ರಹಣ, ತೀರ್ಥಯಾತ್ರೆ ಮುಂತಾದ ಸಂದರ್ಭದಲ್ಲಿ ಕೊಟ್ಟಿರುವುದು ತಿಳಿದು ಬಂದಿದೆ.

ದಾನದ ಉದ್ದೇಶ ಪುಣ್ಯ ಸಂಪಾದನೆ ದಾನಿಯ ಧೀರ್ಘಾಯುಷ್ಯ, ಶಕ್ತಿ, ಕೀರ್ತಿ, ಅಭ್ಯುದಯಗಳಿಗಾಗಿ ದಾನ ಕೊಡಲ್ಪಟ್ಟಿದ್ದನ್ನು ಅನೇಕ ಪ್ರಾಚೀನ ಶಾಸನವನ್ನು ಹೇಳುತ್ತವೆ. ಇನ್ನೂ ಕೆಲವು ಸಂದರ್ಭಗಳಲ್ಲಿ ದಾನ ಗ್ರಾಹಕನು ಬ್ರಾಹ್ಮಣನಾಗಿದ್ದರೆ ನಿತ್ಯವಿಧಿಗಳ ಅನುಷ್ಠಾನ ದೇವತಾ ಪೂಜೆಯ ನಿರ್ವಹಣೆ ದೇವಾಲಯದ ಜೀರ್ಣೋದ್ಧಾರ ಮುಂತಾದ ಉದ್ದೇಶಗಳಿಗಾಗಿ ದಾನ ಕೊಟ್ಟಿರುವುದು ಕಂಡು ಬರುತ್ತದೆ. ದಾನ ಕೊಟ್ಟ ಭೂಮಿಯಿಂದ ಬರುವ ಆದಾಯವನ್ನು ಅಕಾರ್ಯಗಳಿಗಾಗಿ ವಿನಿಯೋಗಿಸಬೇಕಿತ್ತು. ಕೆಲವೊಮ್ಮೆ ದಾನ ಗ್ರಾಹಕರು ಕೆಲವು ನಿಯಮಗಳನ್ನು ಪಾಲಿಸಬೇಕಿತ್ತು.

ದಾನ ಪಡೆದ ಭೂಮಿಯನ್ನು ಅವರು ಮಾರುವುದಾಗಲೀ ಅಡವು ಮಾಡುವುದಾಗಲೀ ನಿಷದ್ಧ ಹಾಗೂ ದಾನವನ್ನು ರಕ್ಷಿಸಿದವನು ದಾನ ಕೊಟ್ಟವನಷ್ಟೇ ಪುಣ್ಯ ಭಾಜನನಾಗುತ್ತಾನೆ. ''ದೊರೆಗಳು ಈ ಧರ್ಮ ಕಾರ್ಯವನ್ನು ಸಂರಕ್ಷಿಸಬೇಕು ಹಾಗೆ ಮಾಡದವರು ವಾರಣಾಸಿಯಲ್ಲಿ ಸಾವಿರ ಗೋವುಗಳನ್ನು ಕೊಂದ ಪಾಪಕ್ಕೆ ಗುರಿಯಾಗುತ್ತಾರೆ ಎಂಬ ಹೇಳಿಕೆ ಹಲವಾರು ಶಾಸನಗಳ ಅಂತ್ಯದಲ್ಲಿ ಕಾಣಬರುತ್ತದೆ.

## ಶಾಸನಗಳ ಮಹತ್ವ :

ಶಾಸನಗಳಲ್ಲಿ ಇಲ್ಲದೆ ಇರುವ ವಿಷಯವಿಲ್ಲ. 1.ಆ ಕಾಲದ ಭಾಷಾಸ್ವರೂಪವನ್ನು ತಿಳಿಯಲು ಶಾಸನಗಳಿಗಿಂತ ಉತ್ತಮ ಸಾದನವಿಲ್ಲ ಕವಿಗಳು ಯಾವ ಕಾಲದವರೇ ಆಗಿರಲಿ ತಮ್ಮ ಕಾವ್ಯ ಭಾಷೆಯು ಪ್ರೌಢವಾಗಿರಬೇಕೆಂಬ ಬಯಕೆಯಿಂದ ತಮಗಿಂತ ಹಿಂದಿನ ಭಾಷೆಯನ್ನು ಬಳಸಬಹುದು.

2. ಭರತ ಕಂಡದ ಇತಿಹಾಸವನ್ನು ರೂಪಿಸುವುದರಲ್ಲಿಯೂ ಶಾಸನಗಳೇ ಪ್ರಮುಖ ಆಧಾರ ವಿದ್ವಾಂಸರೊಬ್ಬರು ಹೇಳಿರುವಂತೆ ಶಾಸನಗಳು ಪ್ರಾಚೀನ ಭಾರತದ ಕಾಲಾನು ಕ್ರಮಣಿಕೆಯ ಏಕೈಕ ಬಿಣ್ಗುಂಡು.ಮನುಷ್ಯನ ಇತಿಹಾಸದ ವಿಷಯದಲ್ಲಿ ನಮಗಿರುವ ಜ್ಞಾನವೆಲ್ಲಾ, ಜ್ಞಾತದಿಂದ ಅಜ್ಞಾತಕ್ಕೆ ಹೋಗಿ ಸಂಪಾದಿಸಿದರು. ಈ ಜ್ಞಾತವಾದುದೆಲ್ಲವೂ ಬಹುಮಟ್ಟಿಗೆ ಎಲ್ಲಾ ದೇಶಗಳಲ್ಲಿಯೂ ಶಾಸನಗಳಿಂದ ತಿಳಿದು ಬರುತ್ತದೆ.

ನಮ್ಮ ನಾಡಿನ ಜನಜೀವನವು ಶಾಸನಗಳಲ್ಲಿ ಅಭಿವ್ಯಕ್ತಿಗೊಂಡಿರುವಂತೆ ಪ್ರಾಯಶ, ಇನ್ನೆಲ್ಲೂ ವ್ಯೆಕ್ತವಾಗಿಲ್ಲ.

3. ಶಾಸನಗಳಿಂದ ರಾಜರ ಇತಿಹಾಸವನ್ನು ಅವರು ಪರಸ್ಪರ ನಡೆಸಿದ ಘೋರ ಯುದ್ಧಗಳನ್ನು ಅವರ ಕಾಲ್ಪಾನಿಕ ಪ್ರಶಂಸೆಗಳಿಂದ ಮಾತ್ರ ಅರಿಯ ಬಹುದೇ ಹೊರತು ಆ ಕಾಲದ ಒಳ ಆಡಳಿತ ವ್ಯಾಪಾರ, ಸಾಮಾಜಿಕ ವ್ಯವಸ್ಥೆಗಳು, ಧಾರ್ಮಿಕ ಪರಿವರ್ತನೆಗಳು ಮತ್ತು ತಿಕ್ಕಾಟಗಳು ತಿಳಿಯುತ್ತವೆ.

4. ಶಾಸನಗಳು ಯಾವ ವಿಷಯಗಳನ್ನು ಪ್ರಾಧಾನವಾಗಿ ನಿರೂಪಿಸಲು ಹೊರಟಿರುತ್ತವೆಯೋ ಅವುಗಳಿಗಿಂತ ಅನುದ್ದೇಶ ಪೂರ್ವಕವಾಗಿಯೋ ಪ್ರಾಸಂಗಿಕವಾಗಿಯೇ ಅವು ಕೊಡುವ ವಿವರಗಳು ನಮಗೆ ಬಹು ಅಮೂಲ್ಯವಾಗಿರುತ್ತವೆ. ಉದಾಹರಣೆಗೆ ಯಾವುದೋ ದಾನದ ವಿಷಯವನ್ನು ಹೇಳಲು ಹೊರಟ ಶಾಸನವು ಆ ಕಾಲದ ಬೇರೆ ಬೇರೆ ತೆರಿಗೆಗಳು ಅವುಗಳನ್ನು ಸಂಗ್ರಹಿಸುತ್ತಿದ್ದ ಅಧಿಕಾರಿಗಳು, ವ್ಯಾಪಾರ, ಊರು ಧಾರ್ಮಿಕತೆ ಮಂತಾದವನ್ನು ತಿಳಿಸಬಹುದು. ಹೀಗೆ ಹಲವು ಅಂಶಗಳಾದ ಶಾಸನಗಳ ಅಧ್ಯಾಯನವು ಮಹತ್ವ ಪಡೆದಿದೆ.

1. ಎಂ.ಚಿದಾನಂದ ಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಾಯನ ,2002
2. ಶಾಸನಶಾಸ್ತ್ರ ಪ್ರವೇಶ, ಪು. ಸಂ. 25.
3. ಎಂ.ಚಿದಾನಾಂದ ಮಾರ್ತಿಯವರ ಅದ್ಯಂತ ಪೂರ್ವೋಕ್ತ ಪುಟ 14.
4. ಶಾಸನಶಾಸ್ತ್ರ ಪ್ರವೇಶ, ಪು. ಸಂ. 21.
5. ಎಂ.ಚಿದಾನಂದ ಮೂರ್ತಿಯವ ಉದ್ದೃತ ಪುರ್ವೋಕ್ತ ಪುಟ 14.
6. ಕಾವ್ಯಗಳನ್ನು ಬರೆದಿರುವ ಕೆಲವರು ಪ್ರಸಿದ್ಧ ಕವಿಗಳು ಶಾಸನಗಳನ್ನು ಬರೆದಿರುವುದುಂಟು ಉದಾಹರಣೆಗೆ ಕನ್ನಡದ ರನ್ನ, ಜನ್ನ ನಾಗಚಂದ್ರ ಇತ್ಯಾದಿ.
7. ಎ.ಕಾ. ಸಂ : 7 ಕರ್ನಾಟಕ .
8. ಎಂ.ಚಿದಾನಂದ ಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಾಯನ , ಪು. ಸಂ : 165.
9. ಭಾರತೀಯ ಶಾಸನಶಾಸ್ತ್ರ ಪರಿಚಯ ಫ್ಲೀಟ್ ಪುಟ 160.
10. ಎ.ಕಾ . ಸಂಪುಟ 2, ಪುಟ ಸಂಖ್ಯೆ 28.

# ಅಧ್ಯಾಯ -3

# ದೇವಾಲಯ

**ಪೀಠಿಕೆ :**

ದೇವಾಲಯವು ಒಂದು ಸಾಮೂಹಿಕ - ಸಾಂಸ್ಕೃತಿಕ ಸಂಸ್ಥೆ ಪ್ರಾಚೀನ ಕರ್ನಾಟಕದ ಅವಿಭಾಜ್ಯ ಅಂಗಗಳಾಗಿ ಕಾಣಿಸಿಕೊಳ್ಳುತ್ತವೆ. ದೇವಸ್ಥಾನಗಳು ದೇವಾಲಯದ ಹುಟ್ಟು ಬೆಳವಣಿಗೆಯ ವಿಷಯದಲ್ಲಿ ಖಚಿತವಾದ ಒಂದು ತೀರ್ಮಾನಕ್ಕೆ ಬಂದಿಲ್ಲ. ಮೂರ್ತಿ ಪೂಜೆಯ ಆರಂಭ ಮತ್ತು ಬೆಳವಣಿಗೆಗಳ ವಿಷಯವಾಗಿ ದೇವಸ್ಥಾನದಲ್ಲಾಗಲಿ ದೇವತಾ ಮೂರ್ತಿಗಳನ್ನು ಪೂಜಿಸುವ ವಿಷಯವನ್ನು ಧರ್ಮ ಸೂತ್ರಕಾರರು ಸಾಮಾನ್ಯವಾಗಿ ಹೇಳುವುದಿಲ್ಲ ಮನುವು ಹೇಳಿಲ್ಲ ದೇವಸ್ಥಾನಗಳನ್ನು ಸ್ಥಾಪಿಸುವ ಸಂಪ್ರದಾಯವು ಅಶೋಕನಿಂದ ಈಚಿನದು ಬಹು ಜನರು ನೆರೆಯುತ್ತಿದ್ದ ಶ್ರೌತ್ರಯಜ್ಞಗಳ ಸ್ಥಾನದಲ್ಲಿ ಇವು ಕಾಣಿಸಿಗೊಂಡುವು ದೇವಸ್ಥಾನಗಳು ಸಾರ್ವಜನಿಕ ಪೂಜಾ ಕೇಂದ್ರಗಳೆಂದು ಮುಂದೆ ಪರಿಗಣಿತಯಾದವು.[1]

ದೇವಾಲಯಗಳನ್ನು ಕಟ್ಟುವ ಉದ್ದೇಶ ಹಿಂದಿನ ಪಾಪಕರ್ಮಗಳು ಕಳೆದು ಪುಣ್ಯ ದೊರೆಯಲೆಂದು ಹಲವು ಶಾಸನಗಳು ಅದನ್ನು ದೃಢಪಡಿಸುತ್ತದೆ. ಬೀಚನಹಳ್ಳಿ ಶಾಸನವು[2] ರಾಮಚಂದ್ರ ಹೆಬ್ಬಾರವರು, ನಂಜಪ್ಪನವರು, ತುರುದೇವರು ಮೂವರು ಏಕಸ್ತರವಾಗಿ ದುದ್ದನಕೆರೆಗೆ ಮೂರು ಭಂಡಿಗೆ ತಂದೆ - ತಾಯಿಯನ್ನು ಕೊಂದ ಪ್ರಾಯಶ್ಚಿತಕ್ಕೆ ಈ ದಾನ ನೀಡಿದರು.

ದೇವಸ್ಥಾನವನ್ನು ಕಟ್ಟಿದರೆ ಸಾಲದು ಅದು ಊರ್ಜಿತವಾಗಲು ಅದರ ದೇವತಾಕಾರ್ಯಗಳಿಗೆ ಬೇಕಾದಂತಹ ಪೂಜಾ ಸಾಮಾಗ್ರಿಗಳ ಖರ್ಚುವೆಚ್ಚಗಳನ್ನು ಸರಿದೂಗಿಸಲು ಕೆಲವು ಕಂದಾಯ ಪ್ರದೇಶಗಳನ್ನು ಹಾಗೂ ಯಾವ ಯಾವ ವಸ್ತುವಿಗೆ ಎಷ್ಟೆಷ್ಟು ವಿನಿಯೋಗವಾಗಬೇಕು ಎಂಬುದನ್ನು ಶಾಸನಗಳಲ್ಲಿ ಸ್ಪಷ್ಟವಾಗಿ ನಮೂದಿಸಲಾಗುತ್ತಿತ್ತು. ಉದಾಹರಣೆಗೆ ಬಸರಾಳು ಶಾಸನ.[3]

ಕಾಲದ ದೇವಸ್ಥಾನವು ನ್ಯಾಯಾಲಯದ ಕೆಲಸವನ್ನು ಮಾಡಿತು ಅಪರಾಧಗಳನ್ನು ನಿರ್ವಹಿಸುವ ಪ್ರಾಚೀನ ವಿಧಾನವಾದ ದಿವ್ಯವನ್ನು ದೇವಸ್ಥಾನಗಳಲ್ಲಿ ಮಾಡಲಾಗುತ್ತಿತ್ತು.

ಪ್ರಾಚೀನ ಕರ್ನಾಟಕದಲ್ಲಿ ಊರಿಗೆ ದೇವಸ್ಥಾನವೇ ಕೇಂದ್ರಬಿಂದು ಅದರ ಸುತ್ತ ಆ ಊರಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನವು ರೂಪುಗೊಳ್ಳುತ್ತಿತ್ತು. ದೇವಾಲಯವು ದೈವಭಕ್ತಿಯ ಕೇಂದ್ರವಾಗಿದ್ದಂತೆ ವಿದ್ಯಾಕೇಂದ್ರವೂ ಆಗಿದ್ದಿತು. ಶಿಲ್ಪ, ಚಿತ್ರ, ಸಂಗೀತ, ಕುಶಲ ಕಲೆಗಳು ದೇವಾಲಯದ ಆಶ್ರಯದಲ್ಲೇ ನಡೆಯುತ್ತಿದ್ದವು.[4] ಹೀಗೆ ದೇವಾಲಯವು ಒಂದು ಸಾಮಾಜಿಕ ಸಂಸ್ಥೆಯಾಗಿತ್ತು.

## 3.1.ದೇವಾಲಯದ ವಾಸ್ತು ಶಿಲ್ಪ-ಮೂರ್ತಿ ಶಿಲ್ಪದ ಪ್ರಮುಖ ಲಕ್ಷಣಗಳು :

ದೇವಾಲಯವು ಪರಬ್ರಹ್ಮ ಸ್ವರೂಪವಾದ ಭಗವಂತನ ಸ್ವರೂಪವೆಂದು ತಿಳಿದು ಆತನ ಪ್ರತಿನಿಧಿ ವಿಗ್ರಹಗಳನ್ನು ಪ್ರತಿಷ್ಠಿಸಿ ಪೂಜಿಸಬೇಕೆನ್ನುವುದು ದೇವಾಲಯದ ಬಗ್ಗೆ ಇರುವ ವೇದಾಂತ ತತ್ವ ದೇವಾಲಯದ ಇತರ ಭಾಗಗಳಲ್ಲಿ ಭಗವಂತನ ಅವಯವಗಳೆಂದೂ ಅದೇ ರೀತಿಯಲ್ಲಿ ದೇವಾಲಯದ ಅರ್ಧಮಂಟಪ, ನೃತ್ಯ ಮಂಟಪ ಪ್ರಕಾರ, ಶಿಖರ ಗೋಪುರಗಳು ಭಗವಂತನ ಅಂಗಾಂಶಗಳೆಂದು ಎನ್ನುತ್ತದೆ ವೇದಾಂತ.[5]

ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿತ್ತು ಪ್ರಸಿದ್ಧವಾದ ಅರವತ್ತುನಾಲ್ಕು ಕಲೆಗಳಿಗೆಲ್ಲಾ ಶಿಲ್ಪ ಎನ್ನುವ ಹೆಸರೇ ಅನ್ವಯವಾಗುತ್ತಿತ್ತು. ವಾಸ್ತು ಶಿಲ್ಪ ಅದರಲ್ಲಿನ ಒಂದು ವಿಭಾಗವೆಂದು ಹೇಳಬಹುದು. ವಾಸ್ತು ಎಂದರೆ ವಸ್ತುಗಳಿಂದ ನಿರ್ಮಿತವಾದುದು ಎಂಬ ಅರ್ಥವಿರುವಂತೆ ತೋರುತ್ತದೆ. ಅಂದರೆ ಕಟ್ಟಗಳ ನಿರ್ಮಾಣ ಮತ್ತು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥ ಬೆಳೆದು ಬಂದಿತು.[6]

ಪ್ರಾಚೀನ ದೇವಾಲಯಗಳಲ್ಲಿ ಮೂರು ಸೃಷ್ಟಿ ಶೈಲಿಗಳನ್ನು ಕಾಣುತ್ತೇವೆ. ಶಿಲ್ಪ ಗ್ರಂಥಗಳ ಆಧಾರದಿಂದ ಈ ಶೈಲಿಗಳಿಗೆ ನಾಗರಿ, ದ್ರಾವಿಡ ಮತ್ತು ವೇಸರ ಎಂದು ಮೂರು ಬಗೆಗಳಿವೆ. ಇದರಲ್ಲಿ ನಾಗರ ಶೈಲಿ ಉತ್ತರ ಭಾರತದ ವಾಸ್ತುಶಿಲ್ಪ ಪ್ರಾರಂಭಕ್ಕೆ ಕರ್ನಾಟಕದಲ್ಲೂ ಈ ಶೈಲಿ ತಲೆಯೆತ್ತಿತ್ತು. ಆದರೆ ಮುಂದೆ ದ್ರಾವಿಡ ಶೈಲಿಯೇ ಪ್ರಧಾನ ಅಂಗವಾಯಿತು. ದ್ರಾವಿಡ ಶೈಲಿ ದೇವಾಲಯಗಳಲ್ಲಿ ಗೋಪುರಗಳು ಎತ್ತರಕ್ಕೆ ಹೋದಂತೆಲ್ಲಾ ಒಂದು ಆಯಕಟ್ಟಿನಲ್ಲಿ ಚಿಕ್ಕದಾಗುತ್ತೆ ಹೋಗುತ್ತವೆ. ದೇವಾಲಯದ ವಿಮಾನ ಮತ್ತು ಗೋಪುರಗಳು ಎಷ್ಟು ದೂರದವರೆಗೂ ದೃಷ್ಟಿಗೆ ಕಾಣಸಿಗುವುದೇ,

ಅಲ್ಲಿಯವರೆಗಿನ ಭೂಭಾಗವು ಪುಣ್ಯ ಕ್ಷೇತ್ರವೆನಿಸಿ ಕೊಳ್ಳುತ್ತದೆ ಎಂಬ ನಂಬಿಕೆಯು ಗೋಪುರದ ಎತ್ತರದ ರಚನೆಗೆ ಆಧಾರವಾಗಿದೆ. ವಿಮಾನವೆಂದರೆ ಗರ್ಭಗುಡಿಯ ಕಂಠ ಶಿಖರ ಮತ್ತು ಸ್ತೂಪೀ. ಈ ಮೂರು ಭಾಗಗಳು ಸೇರಿ ವಿಮಾನ ಎಂದು ಹೆಸರಾಗಿದೆ. ಒಟ್ಟು ದೇವಾಲಯದ ರಚನೆಯಲ್ಲಿ ಗರ್ಭಗೃಹ, ಅರ್ಧಮಂಟಪ (ಸುಬನಾಸಿ)ನವರಂಗ, ಮುಖಮಂಟರ, ಧ್ವಜಸ್ತಂಭ, ಬಲಿಪೀಠ, ಪ್ರಕಾರ, ಗೋಪುರ, ದೀಪಸ್ತಂಭ, ಪುಷ್ಕರಣಿ, ಉಪವನ ಇಷೆಷ್ಟು ಒಂದು ಆಲಯದ ಅಂಗಾಂಶಗಳು ನಾಗರ ಮತ್ತು ದ್ರಾವಿಡ ಶೈಲಿಗಳೆರಡರಲ್ಲೂ ದೇವಾಲಯದ ಮೇಲೆ ಶಿಖರಗಳಿರುತ್ತವೆ. ವೇಸರ ದೇವಾಲಯಗಳಲ್ಲಿ ಶಿಖರವಿಲ್ಲದೆ ಮಟ್ಟಸ ಆದ ಮೇಲ್ಛಾವಣಿ ಮಾತ್ರ ಇರುತ್ತದೆ. ನಾಗರ ಶೈಲಿಯಲ್ಲಿ ಎದ್ದು ಕಾಣುವ ಮುಖ್ಯ ಅಂಶವೆಂದರೆ ಬಾಗಿದ ರೇಖೆಯ ಆಕಾರದ ಶಿಖರ ಮತ್ತು ಅದರ ಮೇಲೆ ಶೃಂಗದ ಸಂಕೇತಗಳನ್ನುಳ್ಳ ಕಳಶ ಉತ್ತರ ಭಾರತದಲ್ಲಿ ಈ ರೀತಿಯ ಅಂಶ ಹೆಚ್ಚಾಗಿರುವದರಿಂದ ಔತ್ತರೇಯ ರೀತಿಯ ಶಿಖರ ಎಂದು ಕರೆಯಲಾಗಿದೆ. ಭುವನೇಶ್ವರ, ಕೋನಾರ್ಕ್, ಪುರಿ ಇತ್ಯಾದಿ ಕಡೆಗಳಲ್ಲಿ ಈ ಮಾದರಿಯನ್ನು ಕಾಣಬಹುದು.

ದ್ರಾವಿಡ ದೇವಾಲಯದ ಮೆಟ್ಟಿಲುಗಳು ಮೆಟ್ಟಿಲುಗಳಂತೆ ಮೇಲೇರಿ ಕ್ರಮೇಣ ಕಿರಿದಾಗುತ್ತಾ ಹೋಗುತ್ತದೆ. ಮಂಡ್ಯ ತಾಲ್ಲೂಕಿನಲ್ಲಿ ಗಂಗರು, ಚೋಳರು, ಹೊಯ್ಸಳರು, ಅನೇಕ ದೇವಾಲಯವನ್ನು ನಿರ್ಮಿಸಿದ್ದಾರೆ. ಬಾದಾಮಿ ಚಾಲುಕ್ಯರು ರಾಷ್ಟ್ರಕೂಟರು ಹಾಗೂ ನೊಳಂಬರಾಗಲಿ ಈ ಪ್ರದೇಶದಲ್ಲಿ ತಮ್ಮ ಪ್ರಭಾವವನ್ನು ಬೀರಲಿಲ್ಲ. ಈ ಹಿನ್ನಲೆಯಲ್ಲಿ ಮಂಡ್ಯ ಜಿಲ್ಲೆಯ ದೇವಾಲಯಗಳನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಿ ಅವಲೋಕಿಸಬಹುದು.

## 3.2 ಗಂಗರ ಕಾಲದ ದೇವಾಲಯದ ಲಕ್ಷಣಗಳು :

ಗಂಗರ ಕಾಲದ ದೇವಾಲಯದ ವಾಸ್ತು ಶಿಲ್ಪದ ಮಾದರಿಗಳು ಹೆಚ್ಚು ಉಳಿದು ಬಂದಿಲ್ಲ. ಕೆಲವು ಸಂಪೂರ್ಣ ನಾಶವಾಗಿದ್ದರೆ ಕೆಲವು ಬದಲಾವಣೆಗೆ ಪಡೆದವು ಪಲ್ಲವ ಮತ್ತು ಚಾಲುಕ್ಯ ಎರಡು ಸಂಪ್ರದಾಯಗಳ ಪ್ರಭಾವ ಗಂಗರಸರ ಕಲೆಯ ಮೇಲೆ ಕಾಣಿಸಿಕೊಂಡಿದೆ. ಇವರು ಪ್ರಾರಂಭದಲ್ಲಿ ಕಟ್ಟಡ ನಿರ್ಮಾಣಕ್ಕೆ ಇಟ್ಟಿಗೆ, ಗಾರೆ, ಮರಗಳಿಂದ ನಿರ್ಮಿಸುತ್ತಿದ್ದರು.

ಗಂಗರ ಕಾಲದ ವಾಸ್ತು ಮಾದರಿಗಳು ಕುಳ್ಳಾದ ಕಟ್ಟಡಗಳು, ಹೀಗಾಗಿ ಛಾವಣಿ ಬಹಳ

ತಗ್ಗಿನಲ್ಲಿರುತ್ತವೆ. ಕಂಬಗಳೂ ಸಹ ಕುಳ್ಳಾಗಿರುತ್ತವೆ. ಸಾಮಾನ್ಯವಾಗಿ ಪೀಠದ ಮೇಲೆ ದಿಂಡು ನಿಲ್ಲಿಸಿರುತ್ತಾರೆ. ದಿಂಡಿನ ತಳಭಾಗ ಚೌಕಟ್ಟಾಗಿದ್ದು ಮೇಲೆ ದುಂಡಾಗಿರುತ್ತದೆ. ದ್ವಾರಬಂಧುಗಳು ಬಹಳ ಸಾಮಾನ್ಯವಾಗಿರುತ್ತದೆ. ತಳವಿನ್ಯಾಸದಲ್ಲಿ ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ, ಬಲಿಪೀಠ, ಧ್ವಜಸ್ತಂಭ, ಪ್ರಾಕಾರ, ಮಹಾದ್ವಾರ ಲಕ್ಷಣಗಳು ಕಂಡುಬರುತ್ತವೆ.

ಗರ್ಭಗೃಹದಲ್ಲಿ ಲಿಂಗ ಥವಾ ಜಿನಬಿಂಬ ಅಂದರೆ ಮತಕ್ಕನುಸಾರವಾಗಿ ಇರುತ್ತವೆ. ಇವರ ಕಾಲದಲ್ಲಿ ವಿಷ್ಣುವಿನ ದೇವಾಲಯಗಳು ಅಪರೂಪ ದೇವಾಲಯಗಳಾಗಿ, ಬಸದಿಗಳಾಗಲಿ ವಾಸ್ತು ಲಕ್ಷಣ ಒಂದೇ ರೀತಿಯದಾಗಿರುತ್ತದೆ. ದೇವಾಲಯದ ತಳಭಾಗ ಅಷ್ಟ ಕೋನಾಕಾರವಾಗಿದ್ದು ಗೋಡೆಯ ಮೇಲುಗಡೆ ಯಕ್ಷ ಜನರ ಲತಾಪಟ್ಟಿಕೆಗಳಿವೆ.

### 3.3 ಚೋಳ ಶೈಲಿ :

ಗಂಗಸರಸರ ವಾಸ್ತು ಶಿಲ್ಪಕ್ಕೆ ಇಟ್ಟಿಗೆಯು ಆಧಾರವಾಗಿದ್ದು ಮುಂದೆ ಚೋಳರು ಗಂಗವಾಡಿಯನ್ನು ಆಕ್ರಮಿಸಿಕೊಂಡ ಮೇಲೆ ಇಟ್ಟಿಗೆಯ ಕಟ್ಟಡಗಳನ್ನು ಬದಲಾಯಿಸಿ ಕಲ್ಲಿನ ದೇವಾಲಯಗಳನ್ನು ನಿರ್ಮಿಸಿದರು. ಈ ಚೋಳ ದೇವಾಲಯಗಳ ಬಗ್ಗೆ ಒಂದು ದಂತ ಕತೆಯಿಂದ 'ರಾತ್ರಿ ಕಳೆದು ಬೆಳಗಾಗುವುದರೊಳಗೆ ಚೋಳರು ಕಟ್ಟಿಸಿದ ಗುಡಿಗಳು - ದೇವಾಲಯಗಳು'' ಎಂಬ ಮಾತು ಆಯಾ ಊರಿನ ಗುಡಿಗಳ ಮೇಲಿನ ಅಭಿಮಾನವನ್ನು ವ್ಯಕ್ತಪಡಿಸುತ್ತದೆ. ದಪ್ಪದಿಮ್ಮಿಗಳನ್ನು ಅತಿ ನಾಜೂಕಾಗಿ ಜೋಡಿಸಿ ಕಟ್ಟಿರುವ ಗೋಡೆಯ ಹೊರಮೈಯನ್ನು ನಯ ಗೊಳಿಸಿರುವುದಲ್ಲದೆ ಅವುಗಳ ಮೇಲಿನ ಶಿಲ್ಪಗಳನ್ನು ಸ್ಪಷ್ಟವಾಗಿ ಬಿಡಿಸಿ ಅವು ಎದ್ದು ಕಾಣುವಂತೆ ಕೆತ್ತುವುದು ಚೋಳ ಶೈಲಿಯ ವೈಶಿಷ್ಯ, ಚೌಕನೆಯ ಗರ್ಭಗೃಹ, ಅಂತರಾಳ, ಮಹಾಮಂಟಪ ಮತ್ತು ಹೊರ ಗೋಡೆಗಳಲ್ಲಿ ಅಲ್ಲಲ್ಲಿ ಅರೆಗಂಬಗಳು, ನಡುವೆ ಆಳವಿಲ್ಲದೆ ಗೂಡುಗಳು, ಗೂಡುಗಳಲ್ಲಿ ಕೆಲವೊಮ್ಮೆ ಮೂರ್ತಿಗಳು, ಗುಂಡಾಗಿ ಬಾಗಿರುವ ಲೋವೆಗಳು, ಲೋವೆಗಳ ಕೆಳಗೆ ಹಂಸ ಅಥವಾ ಯಾಳಿಗಳ ಸಾಲು ಒಂದು ಅಥವಾ ಮೂರು ಅಂತಸ್ತಿನಲ್ಲಿ ಮೇಲೇರುವ ಗೋಪುರಗಳು ಒಟ್ಟಾರೆ ಚೋಳರ ಆಳ್ವಿಕೆಯಲ್ಲಿ ದ್ರಾವಿಡ ಶೈಲಿಯು ಒಂದು ವಿಶಿಷ್ಟ ಘಟ್ಟವನ್ನು ಪ್ರವೇಶಿಸಿತು.

## 3.4 ಹೊಯ್ಸಳ ಶೈಲಿ

ಚಾಲುಕ್ಯ ರೀತಿಯ ಮುಂದಿನ ಬೆಳವಣಿಗೆಯೇ ಹೊಯ್ಸಳ ಶೈಲಿಯಲ್ಲಿ ಪರ್ಯಾವಸನಗೊಂಡಿತು. ಹೊಯ್ಸಳ ಶೈಲಿಯ ಪ್ರಮುಖ ಲಕ್ಷಣಗಳೆಂದರೆ,

**1.ಕಟ್ಟಡದ ಒಟ್ಟು ರೂಪ ಮತ್ತು ತಲವಿನ್ಯಾಸ :**

ತಲವಿನ್ಯಾಸವು ಸಾಮಾನ್ಯವಾಗಿ ಬಹುಕೋನಾಕಾರವಾಗಿ ಅಂದರೆ ನಕ್ಷತ್ರಾಕಾರವಾಗಿರುತ್ತದೆ. ಈ ತಲವಿನ್ಯಾಸವನ್ನೇ ಅನುಸರಿಸಿ ಅದೇ ಆಕಾರದಲ್ಲಿ ಉತ್ತರವಾದ ಜಗತಿಯಂತೆ ನಿರ್ಮಿಸಿರುವ ಪೀಠಗಳ ಮೇಲೆ ನಿಂತಂತಿರುತ್ತದೆ. ಈ ದೇವಾಲಯಗಳ ರಚನೆ, ಜಗಲಿ ದೇವಾಲಯದ ಸುತ್ತಲೂ ಇದ್ದು ಓಡಾಡುವುದಕ್ಕೆ ಅನುಕೂಲವಾಗಿರುವಷ್ಟು ಅಗಲವಾಗಿರುತ್ತದೆ. ದೇವಾಲಯವನ್ನು ಪ್ರವೇಶಿಸುವುದಕ್ಕೆ ಮುನ್ನ ಕೆಲವು ಮೆಟ್ಟಿಲುಗಳನ್ನೇರಿ ಈ ಜಗಲಿಯ ಮೇಲೆ ಬರಬೇಕಾಗುತ್ತದೆ. ಆ ಉತ್ತರದಲ್ಲಿ ನಿಂತು ಸುತ್ತಲೂ ಅಗಲವಾದ ಜಗುಲಿಯನ್ನುಳ್ಳ ಈ ದೇವಾಲಯಗಳು ನೋಟಕ್ಕೆ ತುಂಬಾ ಗಂಭೀರವಾಗಿ ಕಂಗೊಳಿಸುತ್ತವೆ. ಈ ಸುತ್ತು ಜಗಲಿಯೇ ಪ್ರದಕ್ಷಿಣ ಪಥವೂ ಆಗಿ ಪರಿಣಮಿಸುವುದರಿಂದ ಒಳಭಾಗದಲ್ಲಿ ಗರ್ಭಗೃಹದ ಸುತ್ತ ಚಾಲುಕ್ಯ ದೇವಾಲಯಗಳಲ್ಲಿರುವಂತೆ ಪ್ರದಕ್ಷಿಣಪಥ, ಹೊಯ್ಸಳ ದೇವಾಲಯಗಳಲ್ಲಿರುವುದಿಲ್ಲ .

**2. ಗೋಡೆಯ ರಚನೆ ಮತ್ತು ಅದರ ಮೇಲಿನ ಅಲಂಕಾರಗಳು :**

ಹೊಯ್ಸಳ ದೇವಾಲಯದ ಗೋಡೆಗಳು ಒಂದು ಸಮತಲ ಸ್ವರೂಪದ ಪ್ರಭಾವವನ್ನು ಬೀರುತ್ತವೆ. ದೇವಾಲಯದ ಸುತ್ತಲೂ ಬಳಸಿ ಬಂದಿರುವ ಅಲಂಕಾರ ಪಟ್ಟಿಕೆಗಳು ಈ ಗೋಡೆಗಳ ವೈಶಿಷ್ಟ್ಯ ದೇವಾಲಯದ ಬುಡದಿಂದ ಸುಮಾರು ಐದು ಅಡಿಗಳಷ್ಟು ಎತ್ತರದವರೆಗೆ ಒಂದರ ಮೇಲೊಂದರಂತೆ ಈ ಚಿತ್ರದ ಪಟ್ಟಿಕೆಗಳಿರುತ್ತವೆ. ಇವುಗಳಲ್ಲಿ ಅತ್ಯಂತ ಕೆಳಗಡೆಯ ಮೊಟ್ಟ ಮೊದಲನೇ ಸಾಲಿನಲ್ಲಿ ಆನೆಗಳ ಸಾಲುಗಳು ದೇವಾಲಯದ ಸುತ್ತ ಉತ್ಸವ ಹೊರಟಂತಿರುತ್ತದೆ. ದೇವಾಲಯದ ಶಕ್ತಿ ಮತ್ತು ಸ್ಥಿರತೆಗಳ ಸಂಕೇತವಾಗಿ ಇವು ರೂಪುಗೊಂಡಿವೆ ಎನ್ನಬಹುದು. ಇದರ ಮೇಲೆ ಬರುವ ಇನ್ನೊಂದು ಅಲಂಕಾರ ಘಟ್ಟಿಕೆ, ಕುದುರೆಗಳನ್ನೇರಿ ಹೊರಟಿರುವ ರಾವುತರನ್ನು ಒಳಗೊಂಡಿರುತ್ತದೆ. ಚಲನ ಶಕ್ತಿಯ ಚೈತನ್ಯಕ್ಕೆ ಇವು ಪ್ರತೀಕ ಇವುಗಳ ಮೇಲೆ ಕೆಲವು ವೇಳೆ ಶಾರ್ದೂಲಗಳು, ನದಿಯ ಸಾಂಕೇತಿಕ ಚಿತ್ರಗಳು

ಹಂಸಗಳು, ಬಳ್ಳಿಗಳು ಬರುತ್ತವೆ. ಬಹಳ ಮುಖ್ಯವಾದವುಗಳೆಂದರೆ ಅನಂತರ ಬರುವ ಅಲಂಕಾರ ಪಟ್ಟಿಕೆ ಅಗಲದಲ್ಲಿ ಒಂದು ಅಡಿಗಿಂತಲೂ ಕಿರಿದಾದ ಈ ಪಟ್ಟಿಕೆ ರಾಮಾಯಣ ಮಹಾಭಾರತದ ಕಥೆಗಳನ್ನೆಲ್ಲಾ ಕಲ್ಲಿನಲ್ಲಿ ಹೇಳುತ್ತದೆ. ನಿಂತು ನೋಡುವವರ ಕಣ್ಣಿನ ಮಟ್ಟಕ್ಕೆ ಬರುವಷ್ಟು ಎತ್ತರದಲ್ಲಿ ಇದು ಬರುವುದರಿಂದ, ಶಿಲ್ಪಕೃತಿಯ ವಿವರಗಳನ್ನೆಲ್ಲಾ ಸುಲಭವಾಗಿ ಗುರುತಿಸಬಹುದು. ಇವುಗಳ ಮೇಲೆ ಮತ್ತೆ ಅಲಂಕಾರದ ಬಳ್ಳಿಗಳೂ ಹಂಸಗಳು ಇರುವ ಪಟ್ಟಿಕೆಗಳು ಬರುವುದುಂಟು. ಈ ಪಟ್ಟಿಕೆಗಳಾದ ಮೇಲೆ ಗೋಡೆಗಳ ವಿಸ್ತಾರವಾದ ಭಾಗ ಬರುತ್ತದೆ. ಅಲ್ಲಿ ಅನೇಕ ದೇವತೆಗಳ ದೊಡ್ಡ ಆಕಾರದ ಶಿಲ್ಪಕೃತಿಗಳು ಗೋಡೆಯನ್ನು ಅಂಲಕರಿಸಿರುತ್ತವೆ. ಮಧ್ಯದಲ್ಲಿ ಚಾಲಾಂದ್ರದ ಕಿಟಕಿಗಳು ಮತ್ತು ಗೋಡೆಯ ಮೇಲೆ ಕಂಟಾಜನ ಅದರ ಮೇಲೆ ತುದಿಯ ಸಾಲಿನವರೆಗೂ ಕಂಬಗಳು ಆ ಕಂಬಗಳ ಬೋದಿಗೆಯ ಮೇಲೆ ಮದನಿಕಾ ವಿಗ್ರಹಗಳು ಇತ್ಯಾದಿಗಳಿಂದ ಕೂಡಿ ಗೋಡೆಗಳ ರಚನೆ ಸಂಪೂರ್ಣ ಸ್ವರೂಪದ್ದಾಗಿರುತ್ತದೆ. ದೇವಾಲಯದ ನಕ್ಷತ್ರಾಕಾರದ ನಿರ್ಮಾಣವೂ ಗೋಡೆಗಳ ಶಿಲ್ಪಸೌಂದರ್ಯವನ್ನು ಎತ್ತಿ ತೋರಿಸಲು ಸಹಾಯಕವಾಗುತ್ತದೆ.

### 3. ಗೋಪುರ ಅಥವಾ ಶಿಖರಗಳ ರಚನೆ :

ಈ ದೇವಾಲಯಗಳ ಮೂರನೇ ಅಂಶ ಶಿಖರಗಳು, ಹೊಯ್ಸಳ ರೀತಿಯ ಪ್ರಮುಖವಾದ ಅಂಶಗಳು. ದೇವಾಲಯದ ಮುಖ್ಯ ರಚನೆಯಿಂದ ಇವು ಸ್ವಲ್ಪ ಮಟ್ಟಿಗೆ ಬೇರ್ಪಟ್ಟಂತೆಯೇ ಇರುತ್ತವೆ. ದೇವಾಲಯದಿಂದ ಮುಂದೆ ಚಾಚಿದ ಅಲಂಕಾರದ ಸೂರು ಮತ್ತು ಅದರ ನಕ್ಷತ್ರಾಕಾರ ಇವುಗಳ ಮೇಲಿರುವ ಗೋಪುರ ಒಂದು ವಿಶಿಷ್ಟವಾದ ಸೌಂದರ್ಯವನ್ನುಂಟು ಮಾಡುತ್ತಿದೆ. ದ್ರಾವಿಡ ರೀತಿಯಲ್ಲಿರುವಂತೆ ಮೇಲು ಮೇಲಕ್ಕೇರುತ್ತ ಅತಿ ಉತ್ತರವಾಗಿ ಬೆಳೆಯುವ ಪ್ರವೃತ್ತಿ ಇಲ್ಲಿಲ್ಲ. ಅಡ್ಡಡ್ಡಲಾದ ರಚನೆ ಮತ್ತು ಅಲಂಕಾರದ ಭಾಗಗಳಿಂದ ಸಮತೋಲನವನ್ನು ಇವು ಕಾಯ್ದು ಕೊಂಡಿರುತ್ತವೆ. ಚಿಕ್ಕ-ಚಿಕ್ಕ ಆಕಾರದ ಮಂಟಪಗಳಿಂದ ಕೂಡಿ ಹಂತಹಂತವಾಗಿ ಶಿಖರ ಬೆಳೆಯುತ್ತಾ ಹೋಗುತ್ತದೆ. ಈ ಒಂದೊಂದು ಹಂತವನ್ನು ಅಲಂಕಾರ ಪಟ್ಟಿಕೆಗಳು ಇಲ್ಲವೇ ಬಲೆಯಂತೆ ಹೆಣೆದಿರುವ ತಂತು ವಿನ್ಯಾಸದ ರಚನೆಗಳು ಬೇರ್ಪಡಿಸುತ್ತವೆ. ದ್ರಾವಿಡ ರೀತಿಯಲ್ಲಿರುವಂತೆ ಈ ಶಿಖರಗಳು ಸ್ಪಷ್ಟವಾದ ಮೆಟ್ಟಿಲು ಮೆಟ್ಟಿಲಾಗಿರದೆ ಈ ಹಂತಗಳ ಮೇಲೂ ಮೇಲಕ್ಕೆ ಹೋದಂತೆಲ್ಲಾ ಸೂಚ್ಯವಾಗಿ ಒಂದಕ್ಕಿಂತ ಒಂದು ಕಿರಿದಾಗುತ್ತಾ ಹೋಗುತ್ತವೆ. ಈ ಗೋಪುರಗಳಲ್ಲಿ ಒಂದು ಬಗೆಯ ಶಿಲ್ಪಾಕೃತಿಯ

ಸೌಂದರ್ಯವಿದ್ದರೂ ವಾಸ್ತು ಶಿಲ್ಪದ ದೃಷ್ಟಿಯಿಂದ ಇರಬೇಕಾದ ಭದ್ರತೆಯಿಲ್ಲ.

### 4. ಕಂಬಗಳ ನಿರ್ಮಾಣದಲ್ಲಿ ಕಂಡು ಬರುವ ಕುಶಲತೆ :

ದ್ರಾವಿಡ ಶೈಲಿಯ ಮುಂದುವ ರಿದ ಬೆಳವಣಿಗೆ ಇಲ್ಲಿ ಕಾಣುತ್ತದೆ. ಕಂಬಗಳು ಸಾಮಾನ್ಯವಾಗಿ ದುಂಡಾಗಿರುತ್ತವೆ. ಇವು ಸ್ಥೂಲವಾದ ನೋಟಕ್ಕೆ ಒಂದರಂತೆ ಇನ್ನೊಂದು ಕಂಡರೂ ಅವುಗಳ ಮೇಲಿನ ಕೆತ್ತನೆ ಕೆಲಸಗಳಲ್ಲಿಯೂ ವಿವಿಧ ನಕ್ಷೆಗಳಲ್ಲಿಯೂ ವಿಪುಲ ವೈವಿಧ್ಯವನ್ನು ಪಡೆದಿವೆ. ಅವುಗಳ ಕೆತ್ತನೆ ಕೆಲಸಗಳಲ್ಲಿಯೂ ವಿವಿದ ನಕ್ಷೆಗಳಲ್ಲಿಯೂ ವಿಪುಲ ವೈವಿಧ್ಯವನ್ನು ಪಡೆದಿವೆ. ಅವುಗಳ ಬೋಧಿಗೆಗಳು ವಿಸ್ತಾರವಾಗಿದ್ದು, ಮೇಲೆ ನಾಲ್ಕು ಚಚ್ಚಾಕಾರದ ಚಾಚು ಪೀಠಗಳನ್ನು ಒಳಗೊಂಡಿರುತ್ತವೆ. ಇವುಗಳನ್ನು ಕೊರೆದು ನಿರ್ಮಿಸುವ ಯಾವುದಾದರೂ ಯಾಂತ್ರಿಕ ವಿಧಾನವನ್ನು ಕಂಡುಹಿಡಿದಿದ್ದರೇನೋ ಎನ್ನುವಂತಿದೆ. ಕಂಬಗಳು ರೂಪುಗೊಂಡ ಕ್ರಮ ಅವುಗಳ ಸಂಖ್ಯಾ ಬಾಹುಲ್ಯವೂ ಈ ಊಹೆಗೆ ಅವಕಾಶವೀಯುತ್ತದೆ.

ಹೊಯ್ಸಳ ಶಿಲ್ಪಗಳು ಎರಡು ಬಗೆಯ ಲೋವೆಯ ಕಲ್ಲು ಅಂದರೆ ದೇವಾಲಯದ ತುದಿಯಲ್ಲಿ ಬರುವ ಸೂರಿನ ಕಲ್ಲುಗಳನ್ನು ಉಪಯೋಗಿಸುತ್ತಾರೆ. ದ್ರಾವಿಡ ಪದ್ಧತಿಯ ದ್ವಿಭಂಗಿಯಾಕಾರದ್ದನ್ನು ಮುಖಮಂಟಪ ಮತ್ತು ಸಭಾ ಮಂಟಪಗಳಿಗೆ ಉಪಯೋಗಿಸುತ್ತಾರೆ. ವಿಶೇಷವಾಗಿ ಅಲಂಕೃತವಾದ ಗೋಡೆಗಳ ಮೇಲ್ಭಾಗದಲ್ಲಿ ಚಿಕ್ಕದಾದ ಸೂರುಗಲ್ಲನ್ನು ಬಳಸುತ್ತಾರೆ. ಕೊರೆದು ಮಾಡಿದ ರಂದ್ರಗಳುಳ್ಳ ಕಲ್ಲು ಜಾಲಂಧ್ರಗಳನ್ನು ಅಂದವಾದ ರೀತಿಯಲ್ಲಿ ಅಳವಡಿಸಿ ದೇವಾಲಯದ ಸೌಂದರ್ಯ ಹೆಚ್ಚುವಂತೆ ಮಾಡುವುದು ಹೊಯ್ಸಳ ಶಿಲ್ಪಗಳ ಕುಶಲತೆ.

ಈ ಕಟ್ಟಡಗಳಲ್ಲಿ ಆಶ್ಚರ್ಯಕರವಾದ ಇನ್ನೊಂದು ಭಾಗವೆಂದರೆ ಭುವನೇಶ್ವರಿಗಳು ಅಂದರೆ, ರಂಗಮಂಟಪದಲ್ಲಿ ಮೇಲ್ಭಾವಣಿಗಳ ಒಳಭಾಗಗಳು ಒಂದೊಂದು ಅಂಕಣದ ಮಧ್ಯೆ ಇರುವ ಅವುಗಳ ಅಲಂಕಾರಗಳು ಅವುಗಳ ವಿನ್ಯಾಸ ಆಕಾರ ನಕ್ಷೆಗಳಲ್ಲಿ ಕಾಣುವ ವೈವಿಧ್ಯ ಮತ್ತು ಸಮಂಜಸತೆಗಳು ಮೆಚ್ಚುವಂತದ್ದು. ಇಷ್ಟು ಸೂಕ್ಷ್ಮವಾದ ಕೆಲಸವನ್ನು ಈ ಮೇಲ್ಭಾವಣಿಗಳಲ್ಲಿ ಮಾಡಿರುವುದರಿಂದ ಇವುಗಳ ಮೇಲೆ ಭಾರ ಬೀಳದಂತೆ ಇವುಗಳ ಹಿಂದೆ ಭಾರವನ್ನು ಹೊರುವುದಕ್ಕಾಗಿ ಒರಟು ಕಲ್ಲುಗಳಿಂದ ನಿರ್ಮಿತವಾದ ಒಳಛಾವಣಿಯೊಂದಿರುತ್ತದೆ. ಆ ಒಳ ಛಾವಣಿಯ ಮೇಲೆ ಅದನ್ನು ಮುಚ್ಚುವಂತೆ

ಅಲಂಕೃತವಾದ ಈ ಹೊರ ಭಾವಣಿಯನ್ನು ಅಳವಡಿಸಲಾಗಿರುತ್ತದೆ.

ಗರ್ಭಗುಡಿಯ ಗೋಪುರದ ಮುಂಭಾಗದಲ್ಲಿ ಸುಕನಾಸಿಯ ಮೇಲಿರುತ್ತದೆ. ಸಳನು ಹುಲಿಯನ್ನು ಇರಿಯುತ್ತಿರುವ ಹೊಯ್ಸಳ ವಂಶದ ಚಿಹ್ನೆ. ಒಂದು ವೇಳೆ ಈ ಚಿಹ್ನೆ ಇಲ್ಲಿ ದಿದ್ದರೂ ಮೇಲೆ ನೋಡಿದ ಕೆಲವು ಅಂಶಗಳಿಂದ ನೋಡಿದೊಡನೆಯೇ ವಿಶಿಷ್ಟ ರೂಪವನ್ನು ಈ ದೇವಾಲಯಗಳು ಪಡೆದಿರುತ್ತವೆ.

## 3.4. ವಿಜಯನಗರದ ವಾಸ್ತುಶಿಲ್ಪ :

ಈ ಕಾಲದ ದೇವಾಲಯಗಳಲ್ಲಿ ಪ್ರಧಾನವಾಗಿ ಕಾಣುವುದು ದ್ರಾವಿಡ ಶೈಲಿಯ ಮುಂದುವರಿದ ರೂಪವನ್ನು, ಚೋಳರ ಕಾಲದ ದೇವಾಲಯಗಳಂತೆ ಬೃಹದ್ಧಾಕಾರದ ಒಂದೇ ಕಟ್ಟಡಕ್ಕೆ ಬದಲಾಗಿ ಸಾಮಾನ್ಯ ಆಕಾರದ ಅನೇಕ ಕಟ್ಟಡಗಳ ಸಮುದಾಯ ಈ ಕಾಲದ ದ್ರಾವಿಡ ಶೈಲಿಯ ವೈಶಿಷ್ಟ್ಯ. ಮುಖ್ಯ ದೇವಾಲಯ ಮಧ್ಯದಲ್ಲಿದ್ದು ಅದರ ಸುತ್ತ ಕೈಸಾಲೆಗಳು ಮಂಟಪಗಳು ಇರುತ್ತಿದ್ದವು. ಪೂಜಾ ವಿಧಾನದಲ್ಲಾದ ಬದಲಾವಣೆ ಮತ್ತು ಹೆಚ್ಚು ವಿಸ್ತಾರವಾಗಿ ನಡೆಯುತ್ತಿದ್ದ ಉತ್ಸವಾದಿಗಳು ಕಟ್ಟಡದಲ್ಲಾದ ಈ ಬದಲಾವಣೆಗೆ ಕಾರಣವೆಂದು ಹೇಳಬಹುದು. ಹೊಸ ಅವಶ್ಯಕತೆಗಳಿಗೆ ಅನುಗುಣವಾಗಿ ಹಿಂದಿನ ದೇವಾಲಯಗಳನ್ನು ವಿಸ್ತಾರಗೊಳಿಸಿದರು.

### ಕಂಭಗಳ ರಚನೆ :

ಈ ಕಾಲದ ದೇವಾಲಯಗಳ ಸೌಂದರ್ಯ ಮತ್ತು ಸಂಕೀರ್ಣತೆ ಇರುವುದು ಕಂಬಗಳಲ್ಲಿ ಮತ್ತು ಅವುಗಳ ಚಾಚುಪೀಠಗಳಲ್ಲಿ ಹೊಯ್ಸಳರ ಕಂಬಗಳಿಗಿಂತ ಭಿನ್ನ ವಾದ ಕಂಬಗಳಿವು. ಒಂದೊಂದು ಕಂಬ ಮತ್ತು ಅದರ ಬೊದಿಗೆ ಇವು ಸಂಕೀರ್ಣವಾದ ರಚನೆಯಿಂದ ಕೂಡಿ ಕಲ್ಲಿನಲ್ಲಿ ನಿರ್ಮಿತವಾದ ಒಂದೊಂದು ಸಾಂಕೇತಿಕ ನಾಟಕದಂತೆ ಗೋಚರವಾಗುತ್ತದೆ. ಕಂಬಗಳ ಕೆತ್ತನೆಯ ಕೆಲಸದಲ್ಲಿ ಮುಖ್ಯವಾಗಿ ಎರಡು ಮೂರು ಬಗೆಗಳನ್ನು ಕಾಣುತ್ತೇವೆ. ಕಂಬಗಳನ್ನು ಕಂಡರಿಸಿ ಅವುಗಳಲ್ಲಿ ಚಿಕ್ಕ ಚಿಕ್ಕ ಕಂಬಗಳನ್ನು ಮತ್ತೆ ಮತ್ತೆ ಕೊರೆದು ಒಟ್ಟು ಸೌಂದರ್ಯಕ್ಕೆ ಕಾರಣವಾಗುವುದು. ಇನ್ನೊಂದು ರೀತಿಯ ಕಂಬಗಳಲ್ಲಿ ಕೆನೆಯುತ್ತಿರುವ ಕುದುರೆಯ ಅಥವಾ ಭಯಂಕರವಾದ ಪೌರಾಣಿಕ ಪ್ರಾಣಿಯೊಂದರ ಆಕಾರವನ್ನು ಕೆತ್ತಿ ಅದರ ಸುತ್ತ ಕೆತ್ತನೆಯ ಕೆಲಸ ಮಾಡಿರುವುದು ಕಂಡು ಬರುತ್ತದೆ. ಚಿಕ್ಕ ಚಿಕ್ಕ ಗೋಪುರಗಳ ಆಕಾರದಲ್ಲಿ ಕಂಬಗಳ ಮುಖ್ಯ ಭಾಗವನ್ನು ಅಲಂಕರಿಸಿಕೊಂಡು

ಹೋಗಿರುವುದೂ ಉಂಟು ಇನ್ನು ಕೆಲವು ಉಂಟು ಅಥವಾ ಹದಿನಾರು ಮೂಲೆಗಳನ್ನುಳ ಗಟ್ಟಿ ಕಂಬಗಳು ಈ ಎಲ್ಲಾ ರೀತಿಯ ಕಂಬಗಳಿಗೂ ಇತರ ದ್ರಾವಿಡ ದೇವಾಲಯಗಳಲ್ಲಿ ಕಾಣುವಂತೆ ಬೋದಿಗೆಗಳೂ ಚಾಚು ಪೀಠಗಳೂ ಅವುಗಳ ಮೇಲೆ ಅಂಲಕಾರಗಳೂವುಂಟು ಸಾಮಾನ್ಯವಾಗಿ ಚಾಚು ಪೀಠದ ತುದಿಗಳು ಬಾಗಿದ ಕಮಲದ ಮೊಗ್ಗಿನ ಆಕಾರವನ್ನು ತಳೆದು ವಿಜಯನಗರದ ವಾಸ್ತು ಶಿಲ್ಪಕ್ಕೆ ವಿಶಿಷ್ಟತೆಯನ್ನು ತಂದುಕೊಟ್ಟಿತೆನ್ನಬಹುದು.

---

**ಅಡಿ ಟಿಪ್ಪಣಿ :**

1. ಎಂ.ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ : 196.
2. ಎ.ಕಾ.ಕರ್ನಾಟಕ ; ಸಂಪುಟ -7, ಶಾಸನ ಸಂಖ್ಯೆ 20
3. ಎ.ಕಾ.ಕರ್ನಾಟಕ ; ಸಂ.7, ಶಾ.ಸಂ. 29
4. ಎಂ.ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ಸಂಖ್ಯೆ 227.
5. ಆಲೂರು ವೆಂಕಟಕೃಷ್ಣ
6. ಹೆಚ್. ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷ, ಪು.ಸಂ. 599, ಪ್ರಕಾಶನ ವರ್ಷ 2007

# ಅಧ್ಯಯ -4

# ಮಂಡ್ಯ ತಾಲ್ಲೂಕಿನ ಶಾಸನೋಕ್ತ ದೇವಾಲಯಗಳು

ಮಂಡ್ಯ ಜಿಲ್ಲೆಯಲ್ಲಿ ಏಳು ತಾಲ್ಲೂಕುಗಳಿವೆ, ತಾಲ್ಲೂಕುಗಳಲ್ಲಿ ಮಂಡ್ಯಕ್ಕೆ ವಿಶಿಷ್ಟತೆ ಇದೆ. ಮಂಡ್ಯ ತಾಲ್ಲುಕಿನಲ್ಲಿ ಎಂಭತ್ತೇಳು ಶಾಸನಗಳಿವೆ. ಕರ್ನಾಟಕದಲ್ಲಿ ರಾಜ್ಯವಾಳಿದ ಗಂಗರು, ಚೋಳರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರು, ತಮ್ಮ ಆಡಳಿತವಾದಿಯಲ್ಲಿ ಹಲವು ದೇವಾಲಯುಗಳನ್ನು ನಿರ್ಮಿಸಿದರು ಹಾಗೂ ಜೀರ್ಣೋದ್ದಾರ ಮಾಡಿದರು. ಅವುಗಳ ಖರ್ಚುವೆಚ್ಚಗಳಿಗಾಗಿ ದಾನದತ್ತಿ ನೀಡಿ ಪೂಜಾ ಕಾರ್ಯಗಳಿಗೆ ದಕ್ಕೆಯಾಗದಂತೆ ನೋಡಿಕೊಂಡರು. ಈ ವಿಷಯಗಳನ್ನು ಅವರ ಕಾಲವಾಧಿಯಲ್ಲಿ ಕೆತ್ತಿಸಲ್ಪಟ್ಟ ಶಾಸನಗಳಿಂದ ತಿಳಿಯಬಹುದು.

**ಮಂಡ್ಯ ತಾಲ್ಲೂಕಿನಲ್ಲಿ ದೊರೆತಿರುವ ಶಾಸನಗಳು**

| ಗ್ರಾಮಹ ಹೆಸರು | ಶಾಸನ ಸಂಖ್ಯೆ |
|---|---|
| 1. ಉಮ್ಮಡಹಳ್ಳಿ | 4-6 |
| 2. ಕನ್ನಲಿ | 71 |
| 3. ಕಿರಗಂದೂರು | 87 |
| 4. ಕೀಲಾರ | 43 |
| 5. ಕೊತ್ತತ್ತಿ | 80-83 |
| 6. ಕೆರಗೋಡು | 37-38 |
| 7. ಗಾಣದಾಳು | 12 |
| 8. ಗುತ್ತಲು | 59-64 |
| 9. ಚನ್ನಪ್ಪನದೊಡ್ಡಿ | 65,66 |
| 10. ಚಾಮಲಾಪುರ | 42 |
| 11. ಚಿಕ್ಕಬಲಿ | 36 |
| 12. ಜೀಗುಂಡಿಪಟ್ಟಣ | 45 |

| ಗ್ರಾಮಹ ಹೆಸರು | ಶಾಸನ ಸಂಖ್ಯೆ |
|---|---|
| 13. ತಗ್ಗಹಳ್ಳಿ | 74 |
| 14. ಡಣಾಯಕನಪುರ | 39,40 |
| 15. ದುದ್ದ | 15-17 |
| 16. ದೊಡ್ಡಗರುಡನ ಹಳ್ಳಿ | 25,26 |
| 17. ನಾಳನಕೆರೆ | 77 |
| 18. ಪುರ | 72,73 |
| 19. ಬಸ್ರಾಳು | 29-32 |
| 20. ಬೀಚನಹಳ್ಳಿ | 18-20 |
| 21. ಬೇಲೂರು | 67-70 |
| 22. ಬೇವುಕಲ್‌ಹಟ್ನ | 21-22 |
| 23. ಮಂಡ್ಯ | 1-7 |
| 24. ಮರಡೀಪುರ | 13 |
| 25. ಮಲ್ಲಿಗೆರೆ | 27 |
| 26. ಮುತ್ತೇಗೆರೆ | 28 |
| 27. ಮುದಗಂದೂರು | 24 |
| 28. ಮುದ್ದನಗೆರೆ | 41 |
| 29. ಮೊತ್ತಹಳ್ಳಿ | 78,79 |
| 30. ಯಲಿಯೂರು | 85 |
| 31. ಎಲೆಚಾಕನಹಳ್ಳಿ | 84 |
| 32. ರಾಯಶೆಟ್ಟಿಪುರ | 34 |
| 33. ಸಾತನೂರು | 47,48 |
| 34. ಸುಂಡಳ್ಳಿ | 86 |
| 35. ಹಂಪಾಪುರ | 23 |

| | |
|---|---|
| 36. ಹದರನಹಳ್ಳಿ ( ಬೇಜಿರಾಕ್) | 33 |
| 37. ಹಳುವಾಡಿ | 75 |
| 38. ಹಳೇಬೂದನೂರು | 49-55 |
| 39. ಹಲ್ಲೇಗೆರೆ | 35 |
| 40. ಹುಲಿವಾನ | 44 |
| 41. ಹುಲ್ಲೇನಹಳ್ಳಿ | 14 |
| 42 ಹೆಬ್ಬಕವಾಡಿ | 76 |
| 43. ಹೊಸಬೂದನೂರು | 56-58 |
| 44. ಹೊಳಲು | 8-11 |

## ಸಾತನೂರು :

ತಾಲ್ಲೂಕು ಕೇಂದ್ರ ಮಂಡ್ಯದಿಂದ 4 ಕಿ.ಮೀ ಉತ್ತರಕ್ಕೆ ಮಂಡ್ಯ ಕ್ರಿ.ಶ. 1516ರ ತಾಮ್ರ ಶಾಸನದಲ್ಲಿ 'ಸಾತನೂರು' ಎಂದೇ ಉಲ್ಲೇಖಲ್ಪಟ್ಟಿದೆ. ಈ ಶಾಸನವು ನರಸಿಂಹದೇವರ ಬೆಟ್ಟದ ಮೆಟ್ಟಿಲುಗಳ ಬಳಿ ಪೂರ್ವ ಪಾರ್ಶ್ವದಲ್ಲಿ ಆಂಜನೇಯ ಗುಡಿಯ ಎದುರಿಗಿರುವ ಶಾಸನವು ಒಂದು ದತ್ತಿ ಶಾಸನವಾಗಿವೆ. ಬಹುದಾನ್ಯ ಸಂವತ್ಸರದ ಬಾದ್ರಪದ ಶು 5 ರಲು ಗಂಗನಾಯಕ ಬಸವರಸರ ಮಹಿಧನಂ ವೀರಸಂಕರಸರ ನಿರೂಪದಿಂಕು ಪಂದನಾಯಕರು ನಿರೂಪದಿಂದ ಸಿಂಗಯ್ಯನು ಶ್ರೀ ಕಂಬದ ತಿರುಮಲದೇವರ ರತೋತ್ಸವದ ಉದ್ದೇಶಕ್ಕೆ ಬಿಟ್ಟುಕೊಟ್ಟ ಬೆಟ್ಟದ ಬಳಿ ನಾಲ್ಕು ದಿಕ್ಕಿನ ಶಂಖ ಚಕ್ರದ ಕಲ್ಲು ಗಳಾದ ಯೆರೆಯೀ ಹೊನ್ನಿನವೊಳಿಗೆ ಆರಾದರು ಎಂಬ ಉಲ್ಲೇಖ ಶಾಸನದಲ್ಲಿದೆ. ಅಂದರೆ ಕಂಬದ ನರಸಿಂಹನ ಕಾರ ಹಬ್ಬದ ಪ್ರಯುಕ್ತ ವೀರಸಂಕರನ ತಕ್ಷಣನದ ಆಜ್ಞೆಯಿಂದ ಸಿಂಗಯ್ಯನನ್ನು ನರಸಿಂಹ ದೇವರಿಗೆ ನೀಡಿದ ದತ್ತಿಯಾಗಿದೆ. ಶಾಸನವು ದತ್ತಿ ನೀಡಿದ ದಿನವನ್ನು ಕೆತ್ತಿಸಿದೆ. ಬಹುದಾನ್ಯ ಬಾದ್ರಪದ ಸು.5.[1]

ಆದೇ ಆಂಜನೇಯ ಗುಡಿಯ ದೇವಸ್ಥಾನದ ಮುಂದಿರುವ ಕಲ್ಲಿನ ಬೃಂದಾವನದ ಮೇಲೆ ಮತ್ತೊಂದು ಶಾಸನವಿದೆ, ಈ ಶಾಸನದಲ್ಲಿ ಕ್ರೋದಿಸಂವತ್ಸರದ ಚೈತ್ರ ಬಹು $10^{0}$ ಎಂದು ಮಾತ್ರ

ಬರೆದಿದೆ. ವಿವರಣಾತ್ಮಕವಾಗಿಲ್ಲ.[2]

ಇಲ್ಲಿಯ ಶಾಸನೋಕ್ತ ತಿರುಮಲ ದೇವರೇ ಸಾತನೂರು ಬೆಟ್ಟದ ಮೇಲಿರುವ ಕಂಬದ ನರಸಿಂಹನಾಗಿದ್ದು, ಅದನ್ನು ಮಾಂಡವ್ಯ ಮುನಿ, ರಾಮಾನುಜ ಪ್ರತಿಷ್ಠಾಪಿಸಿದನೆಂಬ ಅಭಿಪ್ರಾಯವಿದೆ. ಸಾತನೂರನಿಂದ ಸುಮಾರು 2 ಕಿ.ಮೀ ದೂರದ ಸಣ್ಣ ಬೆಟ್ಟದ ಮೇಲಿರುವ ಇದಕ್ಕೆ ಗರ್ಭಗೃಹ, ಅಂತರಾಳ, ನವರಂಗ ಹಾಗೂ ತೆರೆದ ಮುಖಮಂಟಪಗಳಿದ್ದು, ಗರ್ಭಗೃಹದಲ್ಲಿ ಕಂಬಕ್ಕೆ ನರಸಿಂಹನ ಮುಖವನ್ನು ಧರಿಸಿ ಆರಾಧಿಸಲಾಗುತ್ತಿದ್ದು, ಶಿಖರದಲ್ಲಿ ಲಕ್ಷ್ಮಿ ಇದ್ದಾಳೆ. ಸುಮಾರು 15ನೇ ಶತಮಾನಕ್ಕೆ ಸೇರಿದ ಈ ಗುಡಿಯ ಮುಂದೆ ಪಾದಪಟ್ಟ ಇದ್ದು ಅಲ್ಲೇ ಆಂಜನೇಯ ಹಾಗೂ ಲಕ್ಷ್ಮಿ ಗುಡಿಗಳು ಇವೆ. ಭಕ್ತ ಪ್ರಹ್ಲಾದನ ಮೊರೆಗೆ ಓಗೊಟ್ಟು ಕಂಬದಿಂದ ಬಂದು ಹಿರಣ್ಯಾಕ್ಷ್ಯನನ್ನು ಕೊಂದ ಉಗ್ರನರಸಿಂಹನ ಅವತಾರವೇ ಕಂಬದ ನರಸಿಂಹನ ಹಿಂದಿರುವ ಪೌರಾಣಿಕ ಕಲ್ಪನೆಯಾಗಿದೆ. ಯುಗಾದಿ, ರಥಸಪ್ತಮಿ, ಗೋಕುಲಾಷ್ಟಮಿ ಹಾಗೂ ಕಡೇ ಶ್ರಾವಣಗಳಲ್ಲಿ ವಿಶಿಷ್ಟ ಪೂಜೆ ನಡೆಯುತ್ತಿದ್ದು, ಪ್ರತಿ ಶನಿವಾರದಂದು ಪೂಜೆ ಇರುತ್ತದೆ. ಸಾತನೂರಿನಲ್ಲಿರುವ ಮೈಸೂರು ಅರಸರ ಕಾಲದ ಬೀರೇಶ್ವರನ ಎರಡು ಗುಡಿಗಳು ಒಂದು ಇನ್ನೊಂದರ ಪ್ರತಿರೂಪವಾಗಿದ್ದು ವಿಶಾಲವಾಗಿದೆ. ಊರ ರಸ್ತೆ ಬದಿಯಲ್ಲಿರುವ ಶಂಭುಲಿಂಗೇಶ್ವರ ಗುಡಿಯ ಮಂಡ್ಯ ಕ್ರಿ.ಶ. 1516ರ ತಾಮ್ರ ಶಾಸನದಲ್ಲಿ ಉಲ್ಲೇಖಗೊಂಡಿದ್ದು ಬಳಿಯಲ್ಲಿರುವ ಬೃಂದಾವನಗಳು 19ನೇ ಶತಮಾನದಾಗಿದೆ.

## ಉಮ್ಮಡಹಳ್ಳಿ:

ಜಿಲ್ಲಾ ಕೇಂದ್ರ ಮಂಡ್ಯದಿಂದ ಕೀಲಾರ ಮಾರ್ಗದಲ್ಲಿ 7.ಕಿ.ಮೀ ದೂರದಲ್ಲಿರುವ ಉಮ್ಮಡಹಳ್ಳಿ ಗ್ರಾಮವಿದೆ. ಮೂರುವರೆ ಸಾವಿರದ ಜನಸಂಖ್ಯೆಯುಳ್ಳ ಈ ಗ್ರಾಮಪಂಚಾಯಿತಿ ಕಛೇರಿ ಹೊಂದಿದೆ. ಒಕ್ಕಲಿಗ ಹಾಗೂ ಕುರುಬ, ಹೆಗ್ಗಡೆ ಜನಾಂಗದ ಬಹುಸಂಖ್ಯಾತರಾಗಿದ್ದು, ಹರಿಜನರಲ್ಲಿ ಉಡುಗ್ಯೆ, ಎಡಗ್ಯೆ, ಗಾಣಿಗ, ಮಡಿವಾಳ, ವಿಶ್ವಕರ್ಮ, ಶಿವಭಕ್ತರು ಇದ್ದಾರೆ.

ಈಗಿರುವ ಊರಿನ ದಕ್ಷಿಣದ ಕಡೆ ಒಂದು ಕಿ.ಮೀ. ದೂರದಲ್ಲಿರುವ ಸೋಮೇಶ್ವರ ದೇವಾಲಯವಿರುವ ಪ್ರದೇಶದಲ್ಲಿ ಹಳೇ ಊರು ಇತ್ತು ಹಾಗೂ ಉಮಾಮಹೇಶ್ವರಿಯ ದೇವಾಲಯವಿದೆ. ಉಮಾಮಹೇಶ್ವರಿ ನೆಲೆಸಿರುವ ಈ ಊರಿಗೆ ಉಮ್ಮಡಹಳ್ಳಿ ಎಂದು

ಹೆಸರಿಸಲಾಯಿತು.

ಉಮ್ಮಡಹಳ್ಳಿಯಲ್ಲಿ 16-17ನೇ ಶತಮಾನಕ್ಕೆ ಸೇರಿದ ಒಂದು ಶಾಸನವಿದೆ. ಈ ಶಾಸನವು ಶಕ ವರ್ಷ 1656 ಕಲಯುಕ್ತಿ ಎಂದು ಉಲ್ಲೇಖಿಸಿದೆ. [3]ಊರ ಬಾಗಿಲ ಜಗಲಿಕಟ್ಟೆಯ ಮೇಲೆ ಈ ಶಾಸನವಿದೆ. ಈ ಶಾಸನದ ಕೆಲವು ಅಕ್ಷರಗಳು ಸವೆದಿವೆ. ಅಳಿದುಳಿದಿರುವ ಅಕ್ಷರಗಳು ದತ್ತಿ ನೀಡಿರುವ ವಿಷಯಗಳನ್ನು ತಿಳಿಸುತ್ತವೆ. ಆದರೆ ಯಾರು ಯಾವ ವಿಷಯಕ್ಕಾಗಿ ದತ್ತಿ ನೀಡಿದರು ಎಂಬುದನ್ನು ತಿಳಿಸಿಲ್ಲ.

ಹಳೆಯ ಊರಿದ ಜಾಗದಲ್ಲಿರುವ ಈಶ್ವರನ ದೇವಾಲಯ ಚೋಳರ ಕಾಲದಂತೆ ಕಂಡುಬರುತ್ತದೆ. ಇತ್ತೀಚಿನ ವರ್ಷಗಳ ವರೆಗೆ ದೇಗುಲದ ಆವರಣದಲ್ಲೇ ಮದುವೆಯಂತಹ ಶುಭಕಾರ್ಯಗಳು ನಡೆಯುತ್ತಿದ್ದವು. ಈ ಗ್ರಾಮದಲ್ಲಿ ಹೊಯ್ಸಳರ ಕಾಲಕ್ಕೆ ಸೇರಿದ ವೀರಗಲ್ಲುಗಳಿವೆ. ಒಂದು ಸುಸ್ಥಿತಿಯಲ್ಲಿರುವ ವೀರಗಲ್ಲು ಬೋರೇದೇವರ ಗುಡಿಯ ಜಗತಿಯ ಮೇಲೆ ಇದ್ದು ನಾಲ್ಕು ಕಲ್ಲುಗಳು ನಿರ್ಲಕ್ಷ್ಯಕ್ಕೆ ಒಲಗಾಗಿದೆ.

ಇಲ್ಲಿ 17-18ವೇ ಶತಮಾನಕ್ಕೆ ಸೇರಬಹುದಾದ ಕರೀಕಲ್ಲಿನ ಶಾಸನವಿದೆ. ಮಾಸುಮಾಸಲಾಗಿರುವ ಈ ಶಾಸನದಲ್ಲಿ ' ಉಂಬ ' ಎಂಬ ಪದವಿರುವುದರಿಂದ ಇಲ್ಲಿಯ ಜಮೀನನನ್ನು ಯಾರಿಗೇ ಉಂಬಳಿ ನೀಡಿದ ಹಿನ್ನಲೆಯಲ್ಲಿ ಈ ಗ್ರಾಮಕ್ಕೆ ಉಂಬಳಹಳ್ಳಿ ಎಂಬ ಹೆಸರು ಬಂದು ನಂತರ ಉಮ್ಮಡಹಳ್ಳಿ ಎಂದಾಗಿರಬೇಕು ಎಂಬ ಕಥೆಯಿದೆ. ಈ ಕರಿಕಲ್ಲು ಶಾಸನ ನೆಟ್ಟವನು ಮಾದಿಗ ಜನಾಂಗವನಾಗಿದ್ದನು.

ದೇವಾಲಯಗಳು : 30ಕ್ಕೂ ಹೆಚ್ಚು ದೇವಾಲಯಗಳು ಇಲ್ಲಿವೆ ಆದರೆ ಸುಸ್ಥಿಯಲ್ಲಿರುವುದು ಕೆಲವೇ ಕೆಲವು ದೇವಾಲಯಗಳು. ಇತಿಹಾಸ ಪ್ರಸಿದ್ಧ ಈಶ್ವರ ಉಮಾಮಹೇಶ್ವರಿ, ಬೋರಪ್ಪ ದೇವಾಲಯಗಳು ಶಿಥಿಲಗೊಂಡಿದ್ದು ಜೀರ್ಣೋದ್ಧಾರ ಗೊಳ್ಳಬೇಕಾಗಿದೆ.

## ಗಾಣದಾಳು

ಮಂಡ್ಯದಿಂದ 8 ಕಿ. ಮೀ ದೂರದಲ್ಲಿರುವ ಗಾಣದಾಳು, ಮೇಸುಕೋಟೆ ಮಾರ್ಗದಲ್ಲಿ ಮಲ್ಲನಾಯಕನಕಟ್ಟೆಯ ಹತ್ತಿರ ಕವಲು ಕೆರಗೋಡು ಕ್ಷೇತ್ರಕ್ಕೆ ಸೇರಿದೆ. ಎರಡು ಸಾವಿರಕ್ಕೂ ಹೆಚ್ಚು

ಜನಸಂಖ್ಯೆವಿರುವ ಇಲ್ಲಿ ಒಕ್ಕಲಿಗರು ಶೇ . 80 ಭಾಗವಿದ್ದರೆ, ಶೇ 10 ರಷ್ಟು ಭಾಗ ಹರಿಜನರಿದ್ದಾರೆ ಉಳಿದಂತೆ ಲಿಂಗಾಯುತ ವಿಶ್ವಕರ್ಮ, ಕುರುಬ, ಕುಂಬಾರ, ಅಗಸ, ಮಾದಿಗ ಜನಾಂಗವರಿದ್ದಾರೆ. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, 2 ಅಂಗನವಾಡಿ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್, ಸಮುದಾಯ ಭವನ ಇತ್ಯಾದಿ ಅನುಕೂಲಗಳಿವೆ.

ಈ ಊರಿನಲ್ಲಿ ಮುಖ್ಯವಾಗಿ ಬಸವೇಶ್ವರ, ಚೌಡಮ್ಮ, ಈಶ್ವರ ದೇವಾಲಯಗಲಿವೆ. ದೇವರ ಕುಲದಲ್ಲಿ ಮೊದಲು ಊರು ಕಟ್ಟಿಸಿದ ಮೊತಿಯೊಣ್ಣರು, ಬಸವೇಗೌಡರು, ಶಿವನೇಗೌಡರು ಹಾಗೂ ನಾಗಲಿಂಗೇಶ್ವರ ಮತ್ತು ಆತ್ಮ ಲಿಂಗೇಶ್ವರ ದೇವರ ಕುಲದವರು ಶೈವ ಪಂಥದ ಸಂಪ್ರದಾಯ ಪಂಥದ ತೆಂಡೆಗಳ ಆಳ್ವಿಕೆಯಿಂದ ( ಗಣದ) ಈ ಊರಿಗೆ ಗಣದಾಳು ಎಂಬ ಹೆಸರು ಬಂದಿದೆ.

ಈ ಗ್ರಾಮದಲ್ಲಿರುವ ಹೊಯ್ಸಳರ ವಿಷ್ಣುವರ್ಧನ ಕಾಲದಲ್ಲಿ ದೇವಾಲಯ, ಶಾಸನ, ವೀರಗಲುಗಳು ಹಾಗೂ ದೇವಾಲಯಗಳು ಈ ಊರಿನ ಇತಿಹಾಸವನ್ನು ತಿಳಿಸುತ್ತದೆ. ಆದರೆ ಹೆಚ್ಚಿನ ವಿವರಗಳು ಲಭ್ಯವಿಲ್ಲ ಶಾಸನದ ಮೇಲೆ ಕೆತ್ತಿರುವ ಅಕ್ಷರಗಳು ಅಲ್ಲಲ್ಲಿ ಅಳಿಸಿಹೋಗಿವೆ. ಶಾಸನದಲ್ಲಿ.

*ನಮಸ್ತುಂಗ ರಶ್ಮುಂಬಿಚಂದ್ರಚಾಮರ*

*ಚಾರವೇ ತ್ರ್ಯಲೋಕ್ಯನಗರಾಂಭ*

*ಮೂಲ ಸ್ತಂಭಾಯ ಶಂಭವೇ*

*................ಷ್ಣುವರ್ಧನ ದೇವರು.*

*ದ್ರದೆ ನೆಲೆವೀಡಿಯೋಳ್*[4]

ಎಂಬ ಉಲ್ಲೇಖವಿದೆ ಇದರಿಂದ ಹೆಚ್ಚಿನ ಮಾಹಿತಿಗಳನ್ನು ತಿಳಿಯುವುದಿಲ್ಲ. ಪ್ರಾರಂಭ ಶ್ಲೋಕವಾದ ರಶ್ಮುಂಬಿ ಚಂದ್ರಚಾಮರ ಶಂಭುವೇ ಎಂಬ ಪದಗಳು ಇದು ಶೈವ ಧರ್ಮಕ್ಕೆ ಸೇರಿದ್ದದು ಮತ್ತು ಶೈವ ಧರ್ಮದವರಿಗೆ ನೀಡಿದ ದತ್ತಿ ಶಾಸನ ಎಂಬುದನ್ನು ತಿಳಿಯಬಹುದು.

## ಈಶ್ವರ ದೇವಾಲಯ :

ಹೊಯ್ಸಳರ ಕಲಾವಿದರಿಗೆ ಸೇರಬಹುದಾದ ದೇವಾಲಯ. ಈ ದೇವಾಲಯವು

ಗರ್ಭಗೃಹ,ಅಂತರಾಳ, ಅದರ ಮೂಲಕ ಮುಂಭಾಗ ಕಲ್ಲು ಮಂಟಪವಿದೆ. ಈ ದೇವಾಲಯವು ಸುಮಾರು 1903ರಲ್ಲಿ ನಿರ್ಮಿಸಿದಂತೆ ಕಂಡು ಬರುತ್ತದೆ. ದೇವಾಲಯದ ವಾಸ್ತು ಶೈಲಿಯನ್ನು ಗಮನಿಸಿದರೆ ಚೋಳರ ಶೈಲಿಯಲ್ಲಿದೆ ಎನ್ನಬಹುದು. ಗಟ್ಟಿಯಾದ ಕಲ್ಲುಗಳನ್ನು ಬಳಸಿ ಕಟ್ಟಿದಂತೆ ದೇವಾಲಯ ದಪ್ಪ ದಪ್ಪ ದಿಮ್ಮಿಗಳನ್ನು ಅತಿ ನಾಜೂಕಾಗಿ ಒಂದರ ಮೇಲೊಂದು ಜೋಡಿಸಿದೆ. ಚೌಕಾಕಾರದ ಗರ್ಭಗೃಹವಿದೆ ಗರ್ಭಗೃಹದಲ್ಲಿ ಶಿವಲಿಂಗವಿದೆ. ಮುಂಭಾಗ ಅಂತರಾಳವಿದೆ ರಚನೆ ಸರಳವಾಗಿದೆ. ದೇವಾಲಾಯದ ಗೋಡೆಯ ಮೇಲೆಲ್ಲಾ ಗಿಡಗೆಂಟೆಗಳು ಬೆಳೆದಿವೆ. ಇತ್ತೀಚೆಗೆ ಮುಂದೆ ನವರಂಗ ಇರಬೇಕಾದ ಸ್ಥಳದಲ್ಲಿ ಕಲ್ನಾರ್ ಸೀಟನ್ನು ಹೊಂದಿಸಿ ಆಧುನಿಕರಣಗೊಳಿಸಿದ್ದಾರೆ. ಛಾವಣಿಯ ಮೇಲ್ಭಾಗ ಪಿರಮಿಡ್ಡಿನಾಕಾರದ ಶಿಖರವನ್ನು ಇತ್ತೀಚೆಗೆ ನಿರ್ಮಿಸಿದ್ದಾರೆ. ಗರ್ಭಗೃಹದ ಬಲತುದಿಯಲ್ಲಿ ನಂದಿಯ ವಿಗ್ರಹ ವಿದೆ.

ಸುಮಾರು 90 ಎಕರೆ ವಿಸ್ತೀರ್ಣದ ಕೆರೆ ಇಲ್ಲಿದೆ ಇದರ ಪಕ್ಕದಲ್ಲೇ ಶ್ರೀಬ್ರಹ್ಮದೇವರ ದೇ ಗುಲ ವಿರುವುದನ್ನು ನೋಡಿದರೆಬಹುಶಃ ಹೊಯ್ಸಳರ ಕಾಲದ ಕೆರೆ ಇದಾಗಿದ್ದು ಬ್ರಾಹ್ಮಣರಿಗೆ ಇಲ್ಲಿಯ ಭೂಮಿಯನ್ನು ಬ್ರಹ್ಮದೇಯ ನೀಡಿ ಕೆರೆ ಕಟ್ಟಿರಬೇಕು. ಇಂದು ಕೆರೆಯಲ್ಲಿ ಗಿಡಗಂಟಿ ಬೆಳೆದು ಕೊಂಡಿರುವುದರಿಂದ ಹೂಳು ತೆಗೆಯಬೇಕಾಗಿದೆ.

## ಹಂಪಾಪುರ:-

ಜಿಲ್ಲಾ ಕೇಂದ್ರ ಮಂಡ್ಯದಿಂದ ನಾಗಮಂಗಲ ಮಾರ್ಗದಲ್ಲಿ ಹದಿನಾಲ್ಕು ಕಿ.ಮೀ.ದೂರದಲ್ಲಿ ಸಿಗುವ ಕವಲು ದಾರಿಯಲ್ಲಿ ಎರಡು ಕಿ.ಮೀ. ದೂರ ಕ್ರಮಿಸಿದರೆ ಈ ಗ್ರಾಮ ಸಿಗುತ್ತದೆ. ಕೆರಗೋಡು ಕ್ಷೇತ್ರಕ್ಕೆ ಸೇರುವ ಈ ಗ್ರಾಮ ಉಪ್ಪರಕನಹಳ್ಳಿ ಗ್ರಾಮ ಪಂಚಾಯಿತಿ ವ್ಯಪ್ತಿಗೆ ಸೇರಿದೆ. ಸಾವಿರಕ್ಕೂ ಹೆಚ್ಚು ಜನಸಂಖ್ಯೆಯಲ್ಲಿರುವ ಇಲ್ಲಿ ಬೆಸ್ತರು, ಆದಿಕರ್ನಾಟಕ ಆದಿ ಜಾಂಬವ ಜನಾಂಗವೇ ಪ್ರಮುಖ ಈ ಊರನ್ನು ಕೋಟೆ ಗ್ರಾಮ ಎಂದು ಕರೆಯಲಾಗುತ್ತಿತ್ತು. ಬಹುಶಃ ಮಣ್ಣಿನ ಕೋಟೆ ಇದ್ದು ನಂತರ ನಾಶವಾಗಿರಬೇಕು ಇನ್ನೊಂದು ಐತಿಹ್ಯದ ಪ್ರಕಾರ ಗೌಡರ ಪಾಳೆಯವಾಗಿದ್ದ ಈ ಊರು ನಂತರ ಕೊಂಪಾಪುರವಾಯಿತು. ಕೊಂಪಾಪುರವೇ ಕೊನೆಗೆ ಹಂಪಾಪುರವಾಯಿತು ಎಂಬ ಐತಿಹ್ಯವಿದೆ. ಇಂತಹ ಕುಗ್ರಾಮ ಹಂಪಾಪುರದಲ್ಲಿ ಚೋಳರ. ಕಾಲದ ದೇವಾಲಯ ಹೊಯ್ಸಳರ ಕಾಲದ ಮೂರ್ತಿಶಿಲ್ಪ ಮಾಸ್ತಿ ಹಾಗೂ ವೀರಗಲ್ಲುಗಳು ಗತಕಾಲದ ಇತಿಹಾಸಪವನ್ನು ಹೇಳುತ್ತವೆ. ಒಳಗೆ ಶಿಥಿಲಗೊಂಡಿದೆ. ಹೊಯ್ಸಳರ ಕಾಲದ ಭಿನ್ನಗೊಂಡ ಮೂರ್ತಿ ಶಿಲ್ಪಗಳು ಕಾಲುವೆ ಏರಿ ಮೇಲೆ ಅನಾಥವಾಗಿ ಬಿದ್ದಿವೆ.

ಮಾಸ್ತಿ ಹಾಗೂ ವೀರಗಲ್ಲುಗಳ ಸ್ಥಳ ಗಿಡ ಗಂಟೆ ಬೆಳೆದು ಹಾಳಾಗಿವೆ. ಹಲವಾರು ವೀರಗಲ್ಲುಗಳು ಇಲ್ಲಿವೆ ಅವುಗಳಲ್ಲಿ ಬಸರಾಳು ಮತ್ತು ಕೆರಗೋಡಿನ ಪಾಳೇಗಾರರ ನಡುವೆ ನಡೆದ ಕದನದಲ್ಲಿ ವೀರ ಮರಣ ಹೊಂದಿದ ಕರೆಗೌಡನ ಮಗ ರಂಗಗೌಡನ ವೀರಗಲ್ಲು ಹಾಗೂ 2ನೇ ಬಲ್ಲಾಳ ಮತ್ತು ಸೋಮೇಶ್ವರನ ಆಳ್ವಿಕೆಯ ಕಾಲಕ್ಕೆ ಸೇರಿದ ವೀರಗಲ್ಲುಗಳು ಇಲ್ಲಿವೆ.

**ದೇವಾಲಯ:-** ಹಳೆಯ ಶಿಥಿಲಗೊಂಡಿದ್ದ ಈಶ್ವರ ದೇವಾಲಯವನ್ನು ಮಂಡ್ಯದ ಸತ್ಯಸಾಯಿ ರಾಮುಸಮಿತಿಯವರು ಜೀರ್ಣೋದ್ದಾರ ಕಾರ್ಯ ಕೈಗೊಂಡಿದ್ದಾರೆ ಊರ ಹೊರಗಿನ ವಲಯದಲ್ಲಿರುವ ಬೀರಪ್ಪ ದೇವಾಲಯವನ್ನು ದಳವಾಯಿ ದೇವಾಲಯ ಎಂದು ಕರೆಯುವುದನ್ನು ನೋಡಿದರೆ ಅದು ಒಡೆಯರ ಕಾಲದಲ್ಲಿ ನಿರ್ಮಾಣವಾದಂತೆ ಕಾಣುತ್ತದೆ.

ಹಂಪಾಪುರದಲ್ಲಿರುವ ವೀರಗಲ್ಲು ಗುದಿಯರ ಕುಲದ ಕರೇಗೌಡನ ಮಗ ರಂಗೇಗೌಡ ನೆನಪಿಗಾಗಿ ವಿಶು ಮಾರ್ಗಶಿರ ಸು.15 ಬುದುವಾರ ಜೇಷ್ಠ ಶುಕ್ರ ಕ್ರಿ.ಶ.1221ರಲ್ಲಿ ಕೆತ್ತಿಸಲಾಗಿದೆ.[5] ಈ ಕಾಲಾವಧಿಯಲ್ಲಿ ಹೊಯ್ಸಳರ 2ನೇ ವೀರಬಲ್ಲಾಲ ಆಳ್ವಿಕೆ ಮಾಡುತ್ತಿದ್ದ. ಹೊಯ್ಸಳರ 2ನೇ ವೀರಬಲ್ಲಾಲ ಆಳ್ವಿಕೆ ಮಾಡುತ್ತಿದ್ದ.

## ಚೆನ್ನಪ್ಪನ ದೊಡ್ಡಿ:-

ಜಿಲ್ಲಾ ಕೇಂದ್ರ ಮಂಡ್ಯದಿಂದ ಗುತ್ತಲು-ಬೇಲೂರು ಮಾರ್ಗ ನಡುವೆ ಐದಾರು ಕಿ.ಮೀ. ದೂರದಲ್ಲಿ ಚನ್ನಪ್ಪನ ದೊಡ್ಡಿ ಗ್ರಾಮವಿದೆ. ಸುಮಾರು ಒಂದುವರೆ ಸಾವಿರ ಜನಸಂಖ್ಯೆವುಳ್ಳ ಈ ಗ್ರಾಮ ಬೇಲೂರು ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಸೇರಿದೆ. ಒಕ್ಕಲಿಗರು, ಹರಿಜನರು, ಕುಂಬಾರ ಲಿಂಗಾಯಿತರು ಇಲ್ಲಿ ವಾಸವಾಗಿದ್ದಾರೆ. ಶರಣ ಚನ್ನಪ್ಪ ಎಂಬುವವರು ಇಲ್ಲಿ ಮೊದಲಿಗೆ ತರಗು ಗುಡಿಸಿ ಮನೆ ಕಟ್ಟಿದ್ದರಿಂದ ಈ ಊರಿಗೆ ಚೆನ್ನಪ್ಪನ ದೊಡ್ಡಿ ಎಂಬ ಹೆಸರು ಬಂದಿದೆ. ಮತ್ತೊಂದು ಐತಿಹ್ಯದ ಪ್ರಕಾರ ದೊಡ್ಡಿ ಎಂದ ಮೇಲೆ ಹಸು, ದನ ರಾಸುಗಳನ್ನು ಸಾಕಲಾಗಿತ್ತು. ಚೆನ್ನಪ್ಪನ ದೊಡ್ಡಿಯ ಹಸುವೊಂದು ಈಗಿನ ಗುತ್ತಲಿನ ಸ್ಥಳದಲ್ಲಿದ್ದ ಹುತ್ತದಲ್ಲಿನ ಲಿಂಗಕ್ಕೆ ಹಾಲು ಕರೆಯುತ್ತಿದ್ದೆಂದು ಹುತ್ತ ಅಗೆಯಲಾಗಿ ಶಿವಲಿಂಗ ದೊರೆತು ಅಲ್ಲಿ ದೇಗುಲ ಕಟ್ಟಲಾಯಿತು. ಅದೇ ಅರ್ಕೇಶ್ವರ ದೇವಾಲಯ ಎಂಬ ಮತ್ತೊಂದು ಐತಿಹ್ಯವಾಗಿದೆ.

ಚೆನ್ನಪ್ಪನ್ನ ದೊಡ್ಡಿಯಲ್ಲಿ ಹೊಂಬಾಲಮ್ಮ ದೇವರ ಮನೆಯಲ್ಲಿ ಒಂದು ಶಾಸನವಿದೆ. ಇದು 12ನೇ ಶತಮಾನಕ್ಕೆ ಸೇರಿದ ಚೋಳರ ಶಾಸನ. ವಿವರಗಳು ನಾಶವಾಗಿವೆ. ಶಾಸನದ ಮೇಲೆ ರಾಮು ಮತ್ತು ಪುರುಷೋತ್ತಮರ ಹೆಸರಿದೆ. ಭೂಮಿದಾನ ನೀಡಿದ ವಿಷಯವಿದೆ ಆದರೆ ಯಾರು ಯಾರಿಗೆ ಎಂಬ ವಿವರಗಳಿಲ್ಲ.[6]

ಅದೇ ಹೊಂಬಾಲಮ್ಮನ ಗುಡಿಯಲ್ಲಿ ಇನ್ನೊಂದು ಶಾಸನವಿದೆ. ಇದು ಕೂಡ ಚೋಳರ ಕಾಲಾವಧಿಯದೆ ಇದರಲ್ಲಿರುವ ಅಕ್ಷರಗಳು ಕೂಡ ಸವೆದು ಹೋಗಿದೆ.

ಈ ಊರಿನ ಪಕ್ಕದಲ್ಲೇ ಹಿಂದೆ ಗುತ್ತಲು ಗ್ರಾಮ ಇತ್ತೆಂಬುದಕ್ಕೆ ಅಲ್ಲಿರುವ ಹಳೇ ಗುತ್ತಲು ಬೋರಪ್ಪ ದೇಗುಲವೇ ಆಧಾರ ಆ ದೇಗುಲ ಪಕ್ಕದಲ್ಲೇ ಒಂದು ಶಿಲಾ ಪ್ರತಿಮೆ ಜೊತೆಗೆ ಹತ್ತು ವೀರಗಲ್ಲುಗಳು ಸಾಲಾಗಿ ನಿಂತಿವೆ. ಉಳಿದ ನಾಲ್ಕು ವೀರಗಲ್ಲುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದು ನಿರ್ಲಕ್ಷ್ಯಕ್ಕೇ ಒಳಗಾಗಿವೆ.

## ಡಣಾಯಕನ ಪುರ:-

ಮಂಡ್ಯ ಜಿಲ್ಲಾ ಕೇಂದ್ರದಿಂದ ಕೀಲಾರ ಮಾರ್ಗವಾಗಿ 19 ಕಿ.ಮೀ ದೂರದಲ್ಲಿ ಈ ಗ್ರಾಮವಿದೆ. ಸುಮಾರು ಎರಡೂವರೆ ಸಾವಿರ ಜನಸಂಖ್ಯೆ ಹೊಂದಿರುವ ಈ ಗ್ರಾಮ ಆಲಕೆರೆ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರಿದೆ. ಇತಿಹಾಸದ ಐತಿಹ್ಯದ ಪ್ರಕಾರ ವಿಜಯನಗರದ ಅರಸ ಮಲ್ಲಿಕಾರ್ಜುನನ ಮಹಾಪ್ರಧಾನ ತಿಮ್ಮಣ್ಣ ಡಣಾಯ್ಯಕನ (ದಂಡನಾಯಕ) ಆದೇಶದಂತೆ ಮದ್ದೂರು ಸ್ಥಳದ ಲಕ್ಕಪ್ಪನ ಮಗ ತಿಪ್ಪಯ್ಯನ ಮಗನು ಕಳಲೆ ನಾಡಿನ ಬಸವ ಪಟ್ಟಣವನ್ನು ಬೆಳತೂರಿನ ರಾಮನಾಥ ದೇವಾಲಯಕ್ಕೆ ಈ ಗ್ರಾಮವನ್ನು ದಾನ ನೀಡಿದ ವಿಷಯವು ಶಾಸನದಿಂದ ತಿಳಿದು ಬರುತ್ತದೆ. ಹಾಗಾಗಿ ಈ ಗ್ರಾಮಕ್ಕೆ ತಿಮ್ಮಣ್ಣ ಡಣಾಯಕ ಹೆಸರಿನಿಂದ ಡಣಾಯಕನಪುರ ಎಂಬ ಹೆಸರು ಬಂದಿರಬೇಕು.

ಇಂದೊಂದು ದಾನಶಾಸನವಾಗಿದೆ ಬೆಳತೊರು ಶ್ರೀ ರಾಮದೇವರಿಗೆ ಅಮೃತ ಪಡಿ ಅಂಗ ರಂಗಭೋಗ ಸಮುದಾಯಕ್ಕೆ ಎಂಬ ಉಲ್ಲೇಖವಿದೆ. ಶಾಸನಗಳನ್ನು ಹಾಕಿಸಲು ಅನೇಕ ಉದ್ದೇಶಗಳು ಕಾರಣಗಳು ಇದ್ದಂತೆ ಕಂಡು ಬರುತ್ತದೆ. ಅಮೃತ ಪಡಿ ಅಂಗರಂಗಭೋಗ ಅಂದರೆ ದೇವರ ಅಭಿಷೇಕಕ್ಕೆ

ಹಾಕುವ ಗಂಧ, ಕುಂಕುಮ, ಹೂ ಮತ್ತು ನೈವೈದ್ಯಕ್ಕೆ ದೇವ ಮೂರ್ತಿಗೆ ಮಾಡುವ ಅಲಂಕಾರಕ್ಕೆ ಅಂಗಭೋಗ ಎನ್ನುವರು ರಂಗಭೋಗ ಎಂದರೆ ದೇವರನ್ನೆಲ್ಲ ತಣಿಸಲು ಹಾಡಿ ಹೊಗಳಿ ಸುತ್ತಿಸಲು ದೇವಾಲಯದ ನವರಂಗದಲ್ಲಿ ನೃತ್ಯಾ ಕಾರ್ಯಕ್ರಮ ಏರ್ಪಡಿಸುವುದು. ಅಮೃತ ಪಡಿಯಂದರೆ ನೈವೈದ್ಯ ಪ್ರಸಾದ. ಈ ಖರ್ಚಿಗಾಗಿ ಬೆಳತೂರಿನ ರಾಮದೇವರಿಗೆ ಕಳಲೆಯ ಮದ್ದೂರು ಸ್ಥಳದ ಬಸವ ಪಟ್ಟಣವನ್ನು ಪಡೆದು ಅದಕ್ಕೆ ಲಿಂಗಮುದ್ರೆ ಕಲ್ಲನ್ನು ನೆಟ್ಟದರು. ದೇವತಾ ಕಾರ್ಯವನ್ನು ನಡೆಸಿಕೊಂಡು ಬಂದ ಆತನಿಗೆ ಬಸವಪಟ್ಟಣವನ್ನು ಕೊಟ್ಟ ವಿಚಾರ ಶಾಸನದಲ್ಲಿದೆ. ಈ ಬಸವ ಪಟ್ಟಣದ ತೆರಿಗೆ ಸಂಗ್ರಹದಿಂದ ದೇವರ ಕಾರ್ಯವನ್ನು ನಡೆಸಿಕೊಡ ತಕ್ಕದು ಎಂಬುವುದು ಶಾಸನದ ಉಲ್ಲೇಖ.[7]

## ಕೊತ್ತತ್ತಿ :

ಜಿಲ್ಲಾ ಕೇಂದ್ರ ಮಂಡ್ಯದಿಂದ ಏಳು ಕಿ.ಮೀ ದೂರದ ಬನ್ನೂರು ಮಾರ್ಗದಲ್ಲಿ ಕೊತ್ತತ್ತಿ ಗ್ರಾಮವಿದೆ. ಮಂಡ್ಯಕ್ಕೆ ಸಮೀಪವಿರುವ ಈ ಗ್ರಾಮ ತಾಲ್ಲೋಕಿನ ಹೋಬಳಿ ಕೇಂದ್ರವಾಗಿದ್ದರೂ ಶ್ರೀರಂಗಪಟ್ಟಣ ಕ್ಷೇತ್ರಕ್ಕೆ ಸೇರಿ ಕೊಂಡಿದೆ. ಸುಮಾರು ನಾಲ್ಕುವರೆ ಸಾವಿರ ಜನಸಂಖ್ಯೆ ಹೊಂದಿರುವ ಕೊತ್ತತ್ತಿಯ ಮುಖ್ಯ ರಸ್ತೆಯಲ್ಲಿ ಸಂಚರಿಸಿದರೆ ಈ ಊರಿನ ಇತಿಹಾಸ ಹೇಳುವ ವೀರಗಲ್ಲುಗಳು ಕಾಣಸಿಗುತ್ತವೆ.

ಕೊತ್ತತ್ತಿಯಲ್ಲಿ 2 ದಾನಶಾಸನ ಹಾಗೂ ಹಲವಾರು ವೀರಗಲ್ಲುಗಳಿವೆ. ಒಂದು ಕೊತ್ತತ್ತಿ ಈಶ್ವರದೇವಸ್ಥಾನದ ಪಶ್ಚಿಮಕ್ಕಿದೆ ಶಾಸನ ಸಂಖ್ಯೆ 82ರ ಇದರಲ್ಲಿ ವಿಪ್ಪರನಾಯಕನಿಗೆ ಕೊಟ್ಟ ದಾನ ಎಂದಿದೆ ಆದರೆ ಯಾವ ಕಾರಣಕ್ಕೆ ಎಂದು ತಿಳಿಸಿಲ್ಲ.

ಮತ್ತೊಂದು ಶಾಸನ ಸಂಖ್ಯೆ 83. ಇದು ಈಶ್ವರನ ಗುಡಿಯ ಬಳಿ ಹೊಲದಲ್ಲಿ ನೆಟ್ಟಿದೆ. ಬಹುಭುಜಗಳುಳ್ಳ ಈ ಶಾಸನದ ಕಾಲಾವಧಿ ಶಕ 1100, ಹೇಮಲಾಂಭಿ, ಮಾಘ ಸು.5 ಸೋಮವಾರ ಕ್ರಿ.ಶ. 1178 ಜನವರಿ 25 ಬುದುವಾರ[8]

ಮಲ್ಲೇಶ್ವರ ದೇವರಿಗೆ ಉಂಬಳಿ ಕೊಟ್ಟ ವಿ ಚಾರವನ್ನು ಈ ಶಾಸನ ತಿಳಿಸುತ್ತದೆ. ಸ್ವಸ್ತಿ ಶ್ರೀಮತ

ಮಹಾಮಂಡಳೇಶ್ವರ ತ್ರಿಭುವನ ಮಲ್ಲ ತಲಕಾಡುಗೊಂಡ ಕೊಂಗುನಾಡು, ನೊಳುಬವಾಡಿ, ವುಚ್ಚಂಗಿ ನಾಡುಗೊಂಡ ವೀರಗಂಗ ಹೊಯ್ಸಳ ವೀರಬಲ್ಲಾಳ ದೇವರು ದೋರ ಸಮುದ್ರದ ನೆಲೆವೀಡಾಗಿದ್ದು ಪೃಥ್ವಿರಾಜ್ಯವನ್ನು ಆಳುತ್ತಿದ್ದ ಸಂದರ್ಭದಲ್ಲಿ ಮಂಚೆಗೌಡನ ಮಗ ಬಡಗೆರೆ ನಾಡಾಳುವವನ ಪುತ್ರ ಕುಪೆಮಗ ಚಟ್ಟಗೌಡನ ಮಗ ಪುಣಸಗೌಡನ ಪುತ್ರ ಕೂಕಗೌಡ ಕಾಳಗೌಡ ಆಲದ ಹಳ್ಳಿಯನ್ನು ಕಟ್ಟಿದ ಕೆರೆ ಎತ್ತಿಸಿದ ಮಲ್ಲೇಶ್ವರ ದೇವಾರನ್ನು ಪ್ರತಿಸ್ಥಾಪಿಸಿ ಕೊತ್ತತ್ತಿಯ ಸ್ಥಾನಿಕ ಮಂಚಜೀಯರ ಮಗ ಪೋಲಾಂಡಲ ವೀತರಾಸಿಗೆ ಧಾರಾಪೂರ್ವಕವಾಗಿ ಕೊಟ್ಟ ಭೂಮಿ ಬೆದ್ದಲು 600 ಎಕರೆ.

## ನಾಳನ ಕೆರೆ:-

ಮಂಡ್ಯ ಜಿಲ್ಲಾ ಕೇಂದ್ರದಿಂದ ಹತ್ತು ಕಿ.ಮೀ ದೂರದಲ್ಲಿ ಲಾಳನ ಕೆರೆ ಗ್ರಾಮವಿದೆ. ಕೊತ್ತತ್ತಿ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರುವ ಈ ಗ್ರಾಮದಲ್ಲಿ ಸುಮಾರು 600 ಜನಸಂಖ್ಯೆ ಇದೆ. ಶೇ.80 ಭಾಗ  ಲಿಂಗಾಯಿತರಿದ್ದರೆ ಕುರುಬರು, ಬೆಸ್ತರು ತಲಾ 10 ಭಾಗ ಇದ್ದಾರೆ. ಇನ್ನಾವುದೇ ಜನಾಂಗ ಇಲ್ಲಿ ವಾಸವಾಗಿಲ್ಲ.

ಈ ಗ್ರಾಮದಲ್ಲಿ ವಿಜಯನಗರದ ಒಂದು ಶಾಸನ ಬಸವೇಶ್ವರ ಗುಡಿಯ ಪಶ್ಚಿಮದಲ್ಲಿದೆ. ಶಾಸನ ಕೆತ್ತಿಸಿದ ದಿನಾಂಕ ದುಂದುಭಿ ಸಂವತ್ಸರದ ಪುಷ್ಯ ಸು 9, ಸೋಮವಾರ ' ಇದೊಂದು ದಾನ ಶಾಸನವಾಗಿದೆ. ವಿಜಯನಗರದ ಅರಸ ಸಂಗಮ ವಂಶದ ಎರಡನೇ ಹರಿಹಾರನು ಕಂಣವೊಡೇರ್ (ಬುಕ್ಕಣ್ಣ ಒಡೆಯ) ಮಗ ಕೆಂಪರಾಜನಿಗೆ ನಾಳಿನ ಕೆರೆಯನ್ನು ದಾನ ನೀಡಿದ ಬಗ್ಗೆ ಶಾಸನದಲ್ಲಿ ಉಲ್ಲೇಖಿತವಿದೆ.

ಶಾಸನದಲ್ಲಿ ಉಲ್ಲೇಖಿತಗೊಂಡಂತೆ ಹಿಂದೆ ಇದನ್ನು ನಾಳಿನ ಕೆರೆ ಎಂದೇ ಕರೆಯುತ್ತಿದ್ದರು. ಆದರೆ ಕೊತ್ತತ್ತಿಯ ಪಾಳೇಗಾರನ ಕಾಲದಲ್ಲಿ ಕುದುರೆಗಳಿಗೆ ಲಾಳ ಕಟ್ಟುವ ಸ್ಥಳ ಇದಾಗಿತ್ತು. ಇಲ್ಲೊಂದು ಕೆರೆಯೂ ಇದೆ. ಹೀಗಾಗಿ ಈ ಊರಿಗೆ ಲಾಳನಕೆರೆ ಎಂಬ ಹೆಸರು ಬಂತು ಎಂದು ಹೇಳುವುದುಂಟು.

## ಯಲಿಯೂರು :

ಮಂಡ್ಯದಿಂದ ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ಯಲಿಯೂರು ವೃತ್ತ ಸಿಗುತ್ತದೆ. ಅಲ್ಲಿಂದ ಉತ್ತರ ದಿಕ್ಕಿಗೆ ತಿರುಗಿ ಮಾಯಣ್ಣ ಕೊಪ್ಪಲು ಹತ್ತಿರ ಮತ್ತೆ ಪಶ್ಚಿಮದ ಕಡೆಗೆ ಕ್ರಮಿಸಿದರೆ ಯಲಿಯೂರು ಗ್ರಾಮ ಮಂಡ್ಯದಿಂದ 10 ಕಿ.ಮೀ ದೂರದಲ್ಲಿದೆ. ಈ ಗ್ರಾಮ ಮಂಡ್ಯ ತಾಲೋಕಿಗೆ ಸೇರಿದ್ದರೂ ಕ್ಷೇತ್ರ ಮಾತ್ರ ಶ್ರೀರಂಗಪಟ್ಟಣ ಮೂರು ಸಾವಿರ ಜನಸಂಖ್ಯೆ ಇರುವ ಇಲ್ಲಿ ಶೇ.80 ಭಾಗ ಒಕ್ಕಲಿಗರು, ಶೇ.10 ಭಾಗ ಹರಿಜನ.

ಈ ಗ್ರಾಮದ ಹೊಲವೊಂದರಲ್ಲಿ ಒಂದು ಶಾಸನವಿದೆ. ಹಾಗೂ ಹಲವಾರು ವೀರಗಲ್ಲುಗಳಿವೆ. ಶಾಸನ ಸಂಖ್ಯೆ 85ರ ಕಾಲಾವಧಿ ಅಲ್ಪ ಸ್ವಲ್ಪ ಇದೆ. ಮಾಹಿತಿ ಪೂರ್ಣ ಲಭ್ಯವಿಲ್ಲ ಹೇಮವಲಾಂಭಿ ಸಂವತ್ಸರದ ವೈಶಾಕ ಬ 5 ಪೆಂಮ್ಮಣಗಲುಪನ ಮಗ ನೇವರಸ ಗೌಡನು ತಂದೆ ತಾಯಿ ಮಯೆಲಾಗಿ ತಮ್ಮ ತಂದೆಯೊಂದಿಗೆ ಹೋಗುತ್ತಿರುವಾಗ ದೇವರಸಗೌಡನು ಕಂದು ಕೊಂಡು ರಂಗೆಯಗಾರು ಮಗನಿಗೆ ತಮ್ಮ ಕೋಟೆಯ ಒಳಗಡೆ [10] ಇಷ್ಟು ಮಾಹಿತಿ ಸಿಗುತ್ತದೆ. ಮುಂದೆ ಅಪೂರ್ಣಗೊಂಡಿದೆ. ಇವಿಷ್ಟು ಇ.ಸಿ.ಯ ಮಾ ಇದು ಈ ಶಾಸನ ಊರಲ್ಲಿ ನಾಪತ್ತೆಯಾಗಿದೆ.

ಊರಿನ ಹೊರ ವಲಯದಲ್ಲಿ ಹಳೇ ದೇಗುಲಗಳಾದ ಯಗಚ್ಚಮ್ಮ ಎಚಮ್ಮ ದೇವಾಲಯಗಳಿವೆ ಅವು ಶಿಥಿಲಗೊಂಡಿವೆ.

ಹಲವಾರು ಮಂದಿ ವೀರರು ಇಲ್ಲಿ ಜನಿಸಿದ್ದರೆಂಬುದಕ್ಕೆ ಹೊಯ್ಸಳ ಹಾಗೂ ವಿಜಯನಗರ ಕಾಲಕ್ಕೆಸೇರಬಹುದಾದ ವೀರಗಲ್ಲುಗಳು ಯಥೇಚ್ಚವಾಗಿ ಇಲ್ಲಿವೆ.

## ಎಲೆಚಾಕನಹಳ್ಳಿ:

ಮಂಡ್ಯದಿಂದ ಬೆಂಗಳೂರು - ಮೈಸೂರು ಹೆದ್ದಾರಿಯಲ್ಲಿ ಮೈಸೂರು ಕಡೆಯಲ್ಲಿರುವ ತೂಬಿನಕೆರೆ ಹತ್ತಿರ ಬಲಗಡೆಯ ಕವಲು ದಾರಿಯಲ್ಲಿ ಕ್ರಮಿಸಿದರೆ 11 ಕಿ.ಮೀ. ದೂರದಲ್ಲಿ ಎಲೆಚಾಕನಹಳ್ಳಿ ಗ್ರಾಮ ಸಿಗುತ್ತದೆ. ಕೊತ್ತತ್ತಿ ಹೋಬಳಿಯ ತೂಬಿನ ಕೆರೆ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರುವ ಈ ಗ್ರಾಮದಲ್ಲಿ ಸು ಮಾರು 3000 ಜನಸಂಖ್ಯೆ ಇದೆ. ಒಕ್ಕಲಿಗರು ಬಹು ಸಂಖ್ಯಾತರು.

ಹಿಂದೊಮ್ಮೆ ಈ ಊರಿನ ಪ್ರತಿಯೊಂದು ಮನೆಯವರು ವೀಳೆಯದೆಲೆ ತೋಟ ಹೊಂದಿದ್ದರು

ಜಮೀನು ಇಲ್ಲದವರು ಸಹ ಭೂಮಿಯನ್ನು ಗುತ್ತಿಗೆ ಪಡೆದು ತೋಟ ಇಟ್ಟಿದ್ದರು ಹಿಂದೆ ಸಮಳೆ ಸಮೃದ್ಧವಾಗಿ ಆಗುತ್ತಿದ್ದ ಕಾರಣ ಎಲೆ ಚೆನ್ನಾಗಿ ಬೆಳೆಯುತ್ತಿದ್ದರು. ಈ ಊರಿನಲ್ಲಿ ಎಲೆ ತೋಟ ಕೃಷಿಯೇ ಪ್ರಧಾನವಾಗಿದ್ದು 100 ಎಲೆಗೆ ಒಂದು ಚಾಕ ಎಂದು 200 ಎಲೆಗೆ ಒಂದು ಕಟ್ಟು ಎಂದು ಕರೆಯುತ್ತಿದ್ದರು ಈ ಹಿನ್ನೆಲೆಯಲ್ಲಿ ನೂರು ಎಲೆಗೆ ಚಾಕ ಎಂದು ಕರೆಯುತ್ತಿದ ಊರಿಗೆ ಎಲೆಚಾಕನಹಳ್ಳಿ ಎಂಬ ಹೆಸರು ಬಂತು ಎಂಬುದು ಸ್ಥಳನಾಮದ ಪುರಾಣ.

ಈ ಗ್ರಾಮದಲ್ಲಿ ರುದ್ರದೇವರ ಗುಡಿಯ ಬಾಗಿಲಿನ ಚಾಕಟ್ಟಿನ ಸುತ್ತಲೂ ಒಂದು ಶಾಸನವಿದೆ. ಶಾಸನದ ಕಾಲಾವಧಿ ಶಕ 1747, ಸಂದ ವರ್ದಮಾನವಾದ ಪಾರ್ಥಿವ ನಾಮಸಂವತ್ಸರದ ಕಾರ್ತಿಕ ಶುದ್ಧ ಪಂಚಮೀ ಮಂಗಳವಾರದಲ್ಲೂ [11] ಈ ಶಾಸನ ಸಾರಾಂಶವೆಂದರೆ ಶ್ರೀ ಏರೈಸೂರ ನಗರದ ದಿವ್ಯರತ್ನ ಸಿಂಹಾಸನರೂಢವಾಗಿ ಪೃಥ್ವೀ ಸಾಮ್ರಾಜ್ಯವನ್ನು ಆಳುತ್ತಿರುವ ಮಹಾಸ್ವಾಮಿ ಶ್ರೀಕೃಷ್ಣರಾಜ ಒಡಂಯರ್ ಸಂಸ್ಥಾನದಲ್ಲಿ ಪರಂಪರೆಯಾಗಿ ಪ್ರಿಯಸೇವಕರಾದ ಅರಮನೆ ಒಳಬಾಗಿಲ ಗುರಿಕಾರ್ರು ಚಂನಪ್ಪನವರು ಮಾಡಿಸಿದ ಶ್ರೀವೀರಭದ್ರಸ್ವಾಮಿಯವರ ದೇವಸ್ಥಾನದ ಜೀರ್ಣೋದ್ಧಾರದ ಸೇವೆ.

ಈ ವೀರಭದ್ರ ದೇಗುಲ ಸ್ಥಾಪನೆಯ ಬಗ್ಗೆ ದಂತ ಕಥೆಗಳಿವೆ. ಮೈಸೂರು ಮಹಾರಾಜನ ಮಗಳಿಗೆ ದೆವ್ವದ ಕಾಟವಿತ್ತು. ಯುವರಾಣಿಗೆ ಮೆಟ್ಟಿದ್ದ ದೆವ್ವವನ್ನು ಯಾರಿದಂಲೂ ಬಿಡಿಸಲು ಸಾಧ್ಯವಾಗ ದಿದ್ದಾಗ ನಾಗಮಂಗಲದ ವೀರಭದ್ರದೇವರ ಅರ್ಚಕ ಚನ್ನವೀರಣಾರಾಧ್ಯರವರು ದೆವ್ವ ಬಿಡಿಸಿದವರು. ಅದರಿಂದ ಸಂತಸಗೊಂಡ ಮಹಾರಾಜರು ನಿನಗೇನುಬೇಕೆಂದು ಅರ್ಚಕನನ್ನು ಕೇಳಿದಾಗ ಭೂಮಿ ಹರಿಯದಂತಹ ಅಚಡ.

ಅಂದರೆ ಕಲ್ಲು ಭೂಮಿಯನ್ನು ಕೇಳಿಕೊಂಡನು ನಾಗಮಂಗಲದಿಂದ ಎಲ್ಲಿ ಹೋಗಿ ಸ್ಥಾಪನೆ ಯಾಗುತ್ತೀರೋ ಅಲ್ಲಿ ಭೂಮಿ ಕೊಡುಗೆ ನೀಡುವುದಾಗಿ ಮಹಾರಾಜರು ಮಾತು ನೀಡಿದರು. ಆಗ ಅರ್ಚಕ ವೀರಭದ್ರ ವಿಗ್ರಹ ಸಮೇತ ಬೋರಪ್ಪದೇವರ ಕುಲದ ಒಕ್ಕಲಿಗ ಬೋರೇಗೌಡ ಹಾಗೂ ಹರಿಜನ ಕುಲದ ಕುಲಗೆಂಡೆ ಬೋರನ ಜೊತೆ ತೂಬಿನಕೆರೆಗೆ ಬಂದು ನೆಲೆಸಿದರು. ಅಲ್ಲಿ ಮೊದಲೇ ನೆಲೆಸಿದ್ದ ಲಿಂಗಾಯಿತರು ಊರು ಖಾಲಿ ಮಾಡಿಕೊಂಡು ಸುಂಡಳ್ಳಿಗೆ ಹೋಗಿ ನೆಲಸಿದರು ನಂತರ

ನಾಗಮಂಗಲದಿಂದ ಇವರು ಊರು ಖಾಲಿ ಮಾಡಿಕೊಂಡು ಮೂರ್ತಿ ಸಹಿತ ಎಲೆಚಾಕನಹಳ್ಳಿಗೆ ಒಂದು ನೆಲೆಸಿದರು ಅಲ್ಲಿ ವೀರಭದ್ರ ದೇಗುಲ ನಿರ್ಮಾಣ ಸ್ಥಳೀಯ ಅರ್ಚಕ ಹೇಳುತ್ತಾರೆ. ಅವರೆ ಐತಿಹಾಸಿಕತೆಯನ್ನು ಖಚಿತ ಪಡಿಸಿಕೊಳ್ಳಬೇಕಷ್ಟೇ. ಹೀಗೆ ಮೈಸೂರು ಒಡೆಯರ ಕಾಲದಲ್ಲಿ ನಿರ್ಮಾಣಗೊಂಡಿರುವ ಈ ದೇವಲಾಯ ಮುಮ್ಮಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ಅರಮನೆ ಗುರಿಕಾರ್ರು ಚನ್ನಪ್ಪನ ಕಾಲಾವಧಿಯಲ್ಲಿ 1825 ಗೊಳಿಸಿದರು. ಈ ಸಮಯದಲ್ಲಿ ಗುರಿಕಾರ್ರು ನವರಂಗ, 8 ಶಿಲಾಸ್ತಂಭದ ಮುಖಮಂಟಪ, ದೇಗುಲಕ್ಕೆ ಪ್ರಾಂಗಣ ಅದಕ್ಕೆ 8 ಸ್ತಂಭಗಳ ಪ್ರವೇಶ ದ್ವಾರದ ಮಂಟಪದ ಮೇಲೆ ನಂದಿ ವಿಗ್ರ ನಿರ್ಮಿಸಲಾಗಿದೆ. ಬಾಗಿಲು ಎರಡೂ ಕಡೆ ದೇಗುಲ ಜೀರ್ಣೋದ್ಧಾರಕ ಗುರಿಕಾರ್ರು ಚನ್ನಪ್ಪ ದಂಪತಿಗಳ ಉಬ್ಬು ಶಿಲ್ಪಗಳಿವೆ. ಹಳೆಯ ವಿಗ್ರಹ ನಾಗಮಂಗಲದಿಂದ ತಂದದ್ದು, 1983ರಲ್ಲಿ ಗರ್ಭಗೃಹದಲ್ಲಿನ ಮೂಲ ವಿಗ್ರಹವನ್ನು ಅಲ್ಲಿಯೇ ಹೂಳಿ ನೂತನ ಶಿಲಾಮೂರ್ತಿಯನ್ನು ಗರ್ಭಗೃಹದಲ್ಲಿ, ನವರಂಗದಲ್ಲಿ ಗಣಪತಿ ಮೂರ್ತಿಯನ್ನು ಪ್ರತಿಸ್ಥಾಪಿಸಲಾಗಿದೆ. ಗರುಡ ಶಿಲಾಗಂಭವನ್ನು ನಿಲ್ಲಿಸಿದೆ.

ಚೋಳರ ಕಾಲಕ್ಕೆ ಸಂಬಂಧಪಟ್ಟಂತೆ ಅವರ ಕಾಲದ ಎರಡು ಅಂಕಣದ ಮಲ್ಲೇಶ್ವರ ಶಿಲಾ ದೇಗುಲ ಊರಿನ ಹೊರವಲಯದ ಹೊಲವೊಂದರಲ್ಲದೆ ಗರ್ಭ ಗೃಹದಲ್ಲಿ ಶಿವಲಿಂಗ, ನವರಂಗದಲ್ಲಿ ನಂದಿ ವಿಗ್ರಹ ಜೊತೆಗೆ ಆರು ಪರಿವಾರ ದೇವತೆಗಳ ಉಬ್ಬು ಶಿಲ್ಪಗಳ ವಿಗ್ರಹಗಳಿವೆ.



## ಬೇಲೂರು :

ಮಂಡ್ಯ ಜಿಲ್ಲಾ ಕೇಂದ್ರದಿಂದ ಗುತ್ತಲು ಮಾರ್ಗವಾಗಿ 8 ಕಿ. ಮೀ. ದೂರದಲ್ಲಿ ಬೇಲೂರು ಗ್ರಾಮವಿದೆ. ಮಂಡ್ಯ ಕ್ಷೇತ್ರಕ್ಕೆ ಸೇರಿರುವ ಇದು ಗ್ರಾಮ ಪಂಚಾಯಿತಿಯನ್ನು ಹೊಂದಿದೆ. ಸುಮಾರು ಐದು ಸಾವಿರ ಜನಸಂಖ್ಯೆವುಳ್ಳ ಇಲ್ಲಿ ಶೇಕಡ 75 ಭಾಗ ಒಕ್ಕಲಿಗ 15 ಭಾಗ ಹರಿಜನ ಉಳಿದಂತೆ ಬೆಸ್ತ, ಗಾಣಿಗ, ಮಡಿವಾಳ, ಲಿಂಗಾಯಿತ, ಬ್ರಾಹ್ಮಣ, ಮುಸ್ಲಿಂ ಜನಾಂಗ ವಾಸವಾಗಿದ್ದಾರೆ.

ಹೊಯ್ಸಳ ವಿಷ್ಣುವರ್ಧನ ಬೇಲೂರಿನಲ್ಲಿ ದೇವಾಲಯ ನಿರ್ಮಿಸಿದಂತೆ ಈ ಊರಿನಲ್ಲೂ ಚನ್ನಕೇಶವ ದೇಗುಲ ನಿರ್ಮಿಸಿದ್ದರಿಂದ ಈ ಊರಿಗೆ ಬೇಲೂರು ಎಂಬ ಹೆಸರು ಬಂದಿತ್ತೆಂದು ಸ್ಥಳಿಯರ

ಹೇಳಿಕೆ.

ಬೇಲೂರಿನ ಇತಿಹಾ ಹೇಳುವ ಗಂಗ, ಚೋಳ ಹಾಗೂ ಹೊಯ್ಸಳರ ಕಾಲದ 10, 11, 12, ಮತ್ತು 13 ನೇ ಶತಮಾನದ ನಾಲ್ಕು ಶಾಸನ ಇಲ್ಲಿದೆ. ಅದರಲ್ಲಿ ಒಂದು ತಮಿಳು ಶಾಸನವೂ ಸೇರಿದೆ. ಬೇಲೂರಿನ ಕೆರೆ ಗಂಗರ ಕಾಲದ್ದು 11-12 ನೇ ಶತಮಾನದಲ್ಲಿ ಬೆಲುತ್ತೂರಿನ ಕಾಳಗದಲ್ಲಿ ವೀರ ಮರಣ ಹೊಂದಿದ ಹೊಲಮ ನಾಯಕನ ನೆನಪಿಗಾಗಿ ನಿರ್ಮಿಸಿರುವವ ವೀರಗಲ್ಲು ಮತ್ತು ಹೊಯ್ಸಳ ದೊರೆ ಎರಡನೇ ನರಸಿಂಹನ ಶಾಸನ ಹಾಗೂ 12ನೇ ಶತಮಾನದ ತಮಿಳು ಶಾಸನಗಳಿವೆ. ಗಂಗರ ಕಾಲದಲ್ಲಿ ಕುಂದರನಾಡಿನ ಎಲ್ಲೆಯಲ್ಲಿ ಈ ಗ್ರಾಮ ಇದ್ದ ಕಾರಣ ಬೇಲೂರು ಎಂದು ಈ ಊರಿಗೆ ಹೆಸರು ಬಂದಂತೆ ಕಾಣುತ್ತದೆ.

ದೇವಾಲಯಗಳು : ಚೆನ್ನಕೇಶವ, ಬೊಮ್ಮಲಿಂಗೇಶ್ವರ, ಮಲ್ಲೇಶ್ವರ, ಬಸವ, ಶನಿದೇವರು ಹಾಗೂ ತಿಬ್ಬಾದೇವಿ ಎರಡು ಬೋರೇದೇವರ ದೇವಾಲಯವಿದೆ.

ಶಾಸ್ಷನದ ವಿವರಣೆ :

ಬೇಲೂರಿನ ಕೆರೆ ಏರಿಯ ಮೇಲಿರುವ ತಿಬ್ಬಾದೇವಿ ದೇವಸ್ಥಾನದ ಬಳಿಯಲ್ಲಿ ನೆಟ್ಟ ಶಾಸನ. ಈ ಶಾಸನ ಗಂಗರ ಕಾಲಾವಧಿಯಾಗಿದೆ. ಶಾಸನದ ಹಲವು ಭಾಗದ ಅಕ್ಷರಗಳು ಅಳಿಸಿ ಹೋಗಿವೆ. ಇದೊಂದು ದಾನ ಶಾಸನವಾಗಿದೆ. ಪೆರ್ಗಡೆ ಬಸಣಯ್ಯ ಎಂಬುವವನು ಗಂಗ ಪೆರ್ಪನಂದಿಯು ರಾಜನಾಗಿದ್ದ ಸಂದರ್ಭದಲ್ಲಿ ನಳಯ್ಯನಿಗೆ ಶಕ 944 ದುರ್ಮುಖಿ ಸಂವತ್ಸರದ ಫಾಲ್ಗುಣ ಮಾಸ ಶುದ್ಧ ಪುನರ್ವಸು ನಕ್ಷತ್ರದಲ್ಲಿ 5ನೇ ಸೋಮವಾರ ಜೀವಿತ ಬಿಟ್ಟದ್ದು, [12] ಈ ದಾನದ ಉದ್ದೇಶ ಕೆರೆಯನ್ನು ಕಟ್ಟಿಸಿ ಮಹಾದೇವ ದೇವಾಲಯಕ್ಕೆ ಕೊಳಗ

ಮಣ್ಣಂ 10 ಕೊಳಗ ಮಣ್ತಂ

ದಾನವಾಗಿ ನೀಡುವ ವಿಷಯವನ್ನು ತಿಳಿಸುತ್ತದೆ.

ಮಹಾದೇವ ದೇವಾಲಯ ಮತ್ತು ಕೆರೆ ಕಟ್ಟಿಸುವ ಮಲ್ಲಿಯಾಕಾಚಾರಿಗೆ ಬಿಟ್ಟ ದತ್ತಿಯು

ವಿವರವನ್ನು ತಿಳಿಸುತ್ತದೆ.

ಮತ್ತೊಂದು ಶಾಸನ ಚೆನ್ನಕೇಶವ ದೇವಸ್ಥಾನ ದ ಹತ್ತಿರವಿದೆ. ಈ ಶಾಸನವು ಹೊಯ್ಸಳರ 2ನೇ ನರಸಿಂಹನ ಕಾಲಾವಧಿಯದು. ಈ ಶಾಸನದ ಕಾಲಾವಧಿ ನಂದನ ಸಂವತ್ಸರದ ಅಶ್ವಿಜ ಸುದ್ಧ [13] ಎಂದಿದೆ. ಮುಂದೆ ಅಕ್ಷರಗಳು ಸವೆದಿದೆ ಶಾಸನವು ಯಾವ ವಿಷಯವನ್ನು ತಿಳಿಸುತ್ತದೆ ಎಂದು ತಿಳಿದು ಬರುವುದಿಲ್ಲ.

ಇದೇ ದೇವಸ್ಥಾನದ ಮುಂದೆ ಮತ್ತೊಂದು ಶಾಸನವಿದೆ. ತಮಿಳು ಲಿಪಿ ಮತ್ತು ಗ್ರಾಂಥಿಕ ಭಾಷೆಯಲ್ಲಿದೆ. ಈ ಶಾಸನ ರಚನೆಯಾದ ಕಾಲ ಚಿತ್ರಬಾನುಸಂವತ್ಸರ, 8 1102 ಮತ್ತು ಕ್ರಿ.ಶ. 1162, 12ನೇ ಶತಮಾನಕ್ಕೆ ಸೇರಿದ ಈ ಶಾಸನ ಮಹಾ ಸಬಾನಿಂದಿ 20 ಕಂಡುಗ ಬೆಳೆ ಬೆಳೆಯುವ ಭೂಮಿಯನ್ನು (ದೊಡ್ಡ ಏರಿ ಮೇಲಿನ) ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[14]

ಹೊಯ್ಸಳ ಅರಸ 2ನೇ ನರಸಿಂಹನ ಕಾಲಾವಧಿಯಲ್ಲಿ ಸ್ಥಾಪನೆಗೊಂಡ ಚನ್ನಕೇಶವ ದೇವಾಲಯ ಇಂದು ಸಂಪೂರ್ಣ ಶಿಥಿಲವಾಗಿದೆ. ಇದನ್ನು ಹೊಡೆದು ಹಾಕಿ 1976ರಲ್ಲಿ ಪುರಾತತ್ವಜ್ಞರ ನೆರವು ಪಡೆಯದೆ ಆಧುನಿಕ ರೀತಿಯಲ್ಲಿ ದೇಗುಲ ನಿರ್ಮಿಸಿದ್ದರಿಂದ ಹಳೆಯ ಐತಿಹಾಸಿಕ ದೇಗುಲದಂತೆ ಇದು ಕಾಣುತ್ತಿಲ್ಲ. ಗರ್ಭಗೃಹದಲ್ಲಿರುವ ಚನ್ನಕೇಶವ ಮೂರ್ತಿ ಮಾತ್ರ ಹೊಯ್ಸಳರ ಕಾಲದಾಗಿದ್ದು, ಮೂರ್ತಿ ಶಿಲ್ಪ ಕೆತ್ತನೆಯಿಂದ ಗತಕಾಲದ ಹೊಯ್ಸಳರ ಕುಶಲ ಕೆಲಸಗಾರರ ಕೈಚಳಕದ ಅದ್ಭುತವನ್ನು ಕಾಣಬಹುದಾಗಿದೆ. ಕಾಣೆಯಾಗಿದ್ದ ಲಕ್ಷ್ಮಿದೇವಿ ವಿಗ್ರಹವನ್ನು 1980ರಲ್ಲಿ ದೊಡ್ಡ ಕಾಳೇಗೌಡ್ರ ಚನ್ನೇಗೌಡ ಕಂಚಿನ ಲಕ್ಷ್ಮಿದೇವಿ ವಿಗ್ರಹ ಪ್ರತಿಷ್ಠಾಪಿಸಿದ್ದಾರೆ.

## ಕನ್ನಲಿ:

ಮಂಡ್ಯ ಜಿಲ್ಲಾ ಕೇಂದ್ರದಿಂದ ಗುತ್ತಲು - ಬೇಲೂರು ಮಾರ್ಗವಾಗಿ ಹನ್ನೆರಡು ಕಿ.ಮೀ. ದೂರದಲ್ಲಿ ಕನ್ನಲಿ ಗ್ರಾಮವಿದೆ. ಮಂಡ್ಯ ಕ್ಷೇತ್ರಕ್ಕೆ ಸೇರುವ ಈ ಗ್ರಾಮದಲ್ಲಿ ಎರಡೂವರೆ ಸಾವಿರಕ್ಕೂ ಹೆಚ್ಚು ಜನರು ವಾಸವಾಗಿದ್ದಾರೆ. ಊರಿನ ಮೂಲನಿವಾಸಿಗಳು ಉಪ್ಪಾರ ಶೆಟ್ಟರು ಈ ಜಾತಿಯ ಹುಡುಗನೊಬ್ಬ ಭೇಟೆಗೆ ಹೋಗಿದ್ದಾಗ ಕಾಗೇಹಳ್ಳದ ದೊಡ್ಡಿ ಇರುವ ಸ್ಥಳದಲ್ಲಿ ಚನ್ನಿಗರಾಯನ

ಮೂರ್ತಿ ದೊರೆತು ಅದನ್ನು ತರುವಾಗ ವಿಷಾಂಪಾರಿ ಗಿಡದ ಹತ್ತಿರ ಅದರ ತೂಕ ಹೆಚ್ಚಾಗಿ ಮೂರ್ತಿಯನ್ನು ಅಲ್ಲಿಯೇ ಇಟ್ಟನಂತೆ ಕ್ರಮೇಣ ಅಲ್ಲಿ ದೇಗುಲ ನಿರ್ಮಾಣವಾಗಿ ಬೇರೆ ಊರಿನಿಂದ ಶ್ರೀ ವೈಷ್ಣವ ಪೂಜಾರಿಯನ್ನು ಅವನಷ್ಟೇ ಬಂಗಾರ ಕೊಟ್ಟು ಊರಿಗೆ ಕರೆತಂದು ಪೂಜೆಗೆ ನಿಯೋಜಿಸಲಾಯಿತಂತೆ. ಆ ದೇಗುಲವೇ ಚೆನ್ನಕೇಶವ ದೇವಾಲಯ ಎಂಬುದು ಅಲ್ಲಿನ ಜನರ ನಂಬಿಕೆ.

ಊರಿನ ಪ್ರಾಚೀನತೆಯ ಕುರುಹಾಗಿ ಹೊಯ್ಸಳ ದೊರೆ ಸೋಮೇಶ್ವರನ ಕಾಲದ ಶಾಸನವೊಂದು ದೊರೆತಿದೆ. ಶಾಸನದಲ್ಲಿ ಉಲ್ಲೇಖಗೊಂಡ ದಿನಾಂಕ ಸಕ 1173 ವಿರೋಧಕ್ರಿತುಸಂವತ್ಸರದ ಚೈತ್ರ ಸುದ್ಧ ಪಾಡಿವ ಶುಕ್ರವಾರ.[15]

ಈ ಶಾಸನವು ಪ್ರಮುಖವಾಗಿ ತೆರಿಗೆಯ ಬಗ್ಗೆ ತಿಳಿಸುತ್ತದೆ. ಎಂಮದೂರು ಬಿದಿಯರ ಮಲ್ಲಗೌಡ ಶಂಭುವಗೌಡ, ಸಾವುಕನು ಬಳಗಾರರ ಮಲ್ಲಯ್ಯ ಶೆಟ್ಟಿಯಿಂದ ಹಸಿಯಪ್ಪಂಗವು ಚಂದ್ರಾರ್ಕ್ಕತಾರಂಬರ ತಮ್ಮ ಹಳ್ಳಿಯನು ಪಟ್ಟಣವಾಗಿ ಮಾಡುವಲ್ಲಿಗೆ ಕೊಮರಿಯದೆ ನಂಜೆಪುಂಜೆ ಆನಂದ ಸಂವತ್ಸರದ ಮೊದಲಾಗಿ 32 ಗದ್ಯಾಣವನ್ನು ಕೊಡಲು ಒಪ್ಪಿಸಿದ ಕರಾರು ಇದನ್ನು ಬರೆದಾತ ಶ್ಯಾನುಭೋಗ ಗೋಪಯ್ಯ ಹಾಗೆಯೇ ಊರಳಿಯರಾದ ತಮ್ಮಡಿ ಹರದಾಡೆ, ಮಂಚಿಬೋವ ಮಡೆಯಬೋವ ತೆರಿಗೆಯಿಂದ ಹೊರಗುಳಿದರು. ಆದರೆ ನಿಖರವಾದ ದಾಖಲೆ ಲಭ್ಯವಿಲ್ಲ.

ಊರಿನ ಚೆನ್ನಕೇಶವ ದೇವಾಲಯ ಶಿಥಿಲಗೊಂಡಿದೆ ದೇವಾಲಯದ ಪ್ರಕಾರ ಸಂಪೂರ್ಮ ಶಿಥಿಲವಾಗಿದೆ. ಇದರ ಶೈಲಿಯನ್ನು ವಿವರಿಸಲಾಗದಷ್ಟು ಹಾಳಾಗಿವೆ.

ಈ ಊರಿನಲ್ಲಿ ವೀರರು ಮಾತ್ರವಲ್ಲ ವೀರ ವನಿತೆಯರು ಯುದ್ಧದಲ್ಲಿ ಭಾಗವಹಿಸಿದ್ದರು ಎಂಬುದಕ್ಕೆ ಮಹಾಳಾ ಯೋಧೆಯರು ಕತ್ತಿ ಗುರಾಣಿ ಹಿಡಿದಿರುವ ವೀರವನಿತೆಯರ ಕಲ್ಲುಗಳು ಇವೆ. ಹದಿನಾಲ್ಕು ವೀರಗಲ್ಲು ಹಾಗೂ ವೀರ ವನಿತೆಯರ ಕಲ್ಲುಗಳು ಈಗಲೂ ಸಾಕ್ಷಿಯಾಗಿ ನಿಂತಿವೆ.

## ಪುರ :

ಮಂಡ್ಯದಂದ ತಗ್ಗಹಳ್ಳಿ - ಮಳವಳ್ಳಿ ಮಾರ್ಗ ಮಧ್ಯೆ ಎಂಟು ಕಿ.ಮೀ. ದೂರದಲ್ಲಿ ಪುರ ಎಂಬ

ಚಿಕ್ಕಗ್ರಾಮವಿದೆ. ಮಂಡ್ಯ ತಾಲ್ಲೂಕಿನ ಹಳುವಾಡಿ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರುವ ಈ ಗ್ರಾಮದಲ್ಲಿ ಸುಮಾರು ಒಂದು ಕಾಲು ಸಾವಿರ ಜನಸಂಖ್ಯೆ ಇದೆ ಅರ್ಧಭಾಗ ಲಿಂಗಾಯತ ಜನಾಂಗದವರು ಇದ್ದು ಶೇ. 25 ಭಾಗ ಕುಂಬಾರರು, ಶೇ. 20 ಭಾಗ ಹರಿಜನರು ಉಳಿದಂತೆ ಅಗಸ, ವಿಶ್ವಕರ್ಮ, ಒಕ್ಕಲಿಗ, ಮುಸ್ಲಿಂ ಜನಾಂಗ ಇವೆಯಾದರೂ ಮೊದಲ ಮೂರು ಜನಾಂಗದವರು ಪ್ರಮುಖರಾಗಿದ್ದಾರೆ.

ಪುರ ಗ್ರಾಮದಲ್ಲಿ ಎರಡು ಶಾಸನಗಳಿವೆ ಒಂದು ವೀರರ ಗುಡಿಯ ದಕ್ಷಿಣಕ್ಕಿದೆ ಹೊಯ್ಸಳರ 3ನೇ ವೀರ ಬಲ್ಲಾಳನ ಕಾಲಾವಧಿಯದು ಶಾಸನದಲ್ಲಿ ಉಲ್ಲೇಖಿತಗೊಂಡ ದಿನಾಂಕ ಶಕ 1242 ಕಳಯಕಂಡ ಸಂವತ್ಸರೆದ ಕ್ರಿ.ಶ. 1319–20 ರಲ್ಲಿ ಕೆತ್ತಿಸಿದಂತಹ ಶಾಸನ.[16]

ಹೊಯ್ಸಳರ ಕಾಲದಲ್ಲಿ ಈ ಊರು ಅಗ್ರಹಾರವಾಗಿತ್ತು. ಹೊಯ್ಸಳರ ದೊರೆ ಮೂರನೇ ವೀರ ಬಲ್ಲಾಳನ ಕಾಲದ ಮೇಲಿನ ಶಾಸನದಲ್ಲಿ ಇದಕ್ಕೆ ಅಗ್ರಹಾರ ಮಲ್ಲಿಕಾರ್ಜುನ ಪುರ ಎಂಬ ಹೆಸರಿತ್ತೆಂದು ತಿಳಿದುಬರುತ್ತದೆ. ಅಗ್ರಹಾರ ಕ್ರಮೇಣ ಅವನತಿ ಹೊಂದಿ ಮತ್ತೆ ಊರು ಪುನಃ ನಿರ್ಮಾಣದ ಕಾಲದಲ್ಲಿ ಮಲ್ಲಿಕಾರ್ಜುನ ಹೆಸರು ಹೋಗಿ ಪುರ ಎಂಬ ಹೆಸರು ಉಳಿದು ಕೊಂಡಿದೆ.

ಇಲ್ಲಿರುವ ಶಾಸನಕಲ್ಲು ಮತ್ತು ವೀರಗಲ್ಲು ಮಾಸ್ತಿಕಲ್ಲು ಸಮೂಹಕ್ಕೆ ವೀರಣ್ಣನ ಗುಡಿ ಎಂದೇ ಕರೆಯುತ್ತಾರೆ. ಶಾಸನ ಕಲ್ಲು ಹೊಯ್ಸಳರ ಕಾಲದ್ದಾದರೆ ವೀರ ಮಹಾಸತಿ ಕಲ್ಲುಗಳು ವಿಜಯನಗರ ಕಾಲಕ್ಕೆ ಸೇರಿದವು. ಶಾಸನ ಕೆತ್ತಿಸಿದ ದಿನಾಂಕ ಶಕ ವರ್ಷ 1339 [17]ಹೇಮಲಾಂಬಿ ಬಾದ್ರಪದ ಶು. (ಪಂಚಮಿ) ಹಾಡ್ಲೆಯ ಪುರದ ಮಾರಭಕ್ತನ ಮಗ ಭಸವ ಭಕ್ತನ ಮರಣ ಹೊಂದಲಾಗಿ ಮೂವರು ಹೆಂಡಂತಿಯರು ಸತಿಯಾದ ಬಗ್ಗೆ ಹಾಗೂ ಬಸವಭಕ್ತನ ಮಗ ಬೊಮ್ಮಣ್ಣ ಕಳ್ಳರಿಂದ ದನಗಳನ್ನು ಬಿಡಿಸಿಕೊಳ್ಳಲು ಹೋರಾಡಿ ವೀರ ಮರಣ ಹೊಂದಿದ. ಈ ವೀರಗಲ್ಲು - ಮಹಾಸತಿಕಲ್ಲುಗಳು ವಿಜಯನಗರ ಕಾಲಕ್ಕೆ ಸೇರಿದ್ದಾಗಿದೆ.

ಶಾಸನವಿರುವ ವೀರ-ಮಾಸ್ತಿ ಕಲ್ಲು ಏಕಶಿಲೆಯಲ್ಲಿರುವುದು ಇಲ್ಲಿನ ಮತ್ತೊಂದು ವಿಶೇಷವೆಂದರೆ ಚೋಳರ ಕಾಲದಲ್ಲಿ ಒಮ್ಮೆ ಪುರ ಗ್ರಾಮಸ್ಥರೆಲ್ಲರೂ ಟಿ. ಮಲ್ಲಿಗೆರೆಯಲ್ಲಿ ಹಲವು ದಿನಕಾಲ ನಡೆಯುವ

ಗ್ರಾಮದೇವತೆ ಊರಮ್ಮನ ಹಬ್ಬಕ್ಕೆ ಹೋಗಿದ್ದರಂತೆ. ದೊಡ್ಡರಾಜ, ಚಿಕ್ಕರಾಜ ಎಂಬ ಸೋದರರಿಬ್ಬರು ಪುರ ಗ್ರಾಮವನ್ನು ಸೂರೆಗೊಳ್ಳುತ್ತಿದ್ದಾಗ ಇಲ್ಲೆ ವಾಸವಾಗಿದ್ದ ಬೋರೇಗೌಡರ ವಂಶಸ್ಥ ಒಕ್ಕಲಿಗನೊಬ್ಬ ಅವರಿಗೆ ಬೆಂಬಲಿಗನಾಗಿದ್ದನಂತೆ ಈ ಒಕ್ಕಲಿಗನಿಗೆ ಘಾತಕತನವಿದ್ದು ಊರಿನ ಕಂಟಕನಾಗಿದ್ದರಿಂದ ಊರಿನ ಜನ ಈತನನ್ನು ಶಪಿಸಿದರು. ಹೀಗಾಗಿ ಈ ಗ್ರಾಮದಲ್ಲಿ ಒಕ್ಕಲಿಗರು ಏಳಿಗೆ ಇಲ್ಲ ಎಂಬುದು ಅಲ್ಲಿನ ಅಕ್ಕಪಕ್ಕದವರ ನಂಬಿಕೆ ಕಾಕತಾಳೀಯ ಎಂಬಂತೆ ಅಂದಿನಿಂದ ಇಂದಿನವರೆಗೆ ಇಲ್ಲಿ ಒಂದೇ ಕುಳ ಒಕ್ಕಲಿಗರು ಇದ್ದು ಅವರು ಅಭಿವೃದ್ಧಿಯನ್ನು ಹೊಂದಿಲ್ಲದಿರುವುದು ತಿಳಿಯುತ್ತದೆ.

## ಚಾಮಲಾಪುರ:

ಮಂಡ್ಯ ಜಿಲ್ಲಾ ಕೇಂದ್ರದಿಂದ ಹತ್ತು ಕಿ.ಮೀ. ದೂರದಲ್ಲಿ ಚಾಮಲಾಪುರ ಗ್ರಾಮವಿದೆ. ಸಾವಿರಕ್ಕೂ ಹೆಚ್ಚು ಜನಸಂಖ್ಯೆಯುಳ್ಳ ಈ ಗ್ರಾಮ ಹುಲಿವಾನ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರಿದೆ. ಊರು ಕುಗ್ರಾಮವಾದರೂ ಶ್ರೀಮಂತವಾಗಿದೆ ಎಂದು ಹೇಳಬಹುದು.

ಚಾಮಲಾಪುರದ ಬಸವೇಶ್ವರ ದೇಗುಲದ ಆವರಣದಲಲಿ 14-15ನೇ ಶತಮಾನದ ಶಾಸನವಿದೆ. ಹುಲಿವಾನ ಸ್ಥಳಕ್ಕೆ ಸೇರಿದ ಚಾಮಲಾಪುರದಲ್ಲಿನ ಭೂಮಿಯನ್ನು ಮಹಾ ಮಂಡಲೇಶ್ವರ ವೀರ ಚಿಕ್ಕವೊಡೆಯರ ಆಜ್ಞೆಯಂತೆ ತಿಮ್ಮರಸನು ಹೊರಿಸಿದೇವೊಡೆಯರಿಗೆ ನೀಡಿದ ದಾನ ಶಾಸನವಾಗಿದೆ. ಶಾಸನ ಕಾಲಾವಧಿ ಸ್ವಸ್ತಿ ಶ್ರೀ ವಿಜಯಾದ್ಭುದಯ ಸಾಲಿವಾಹನ ಶಕವರುಷ ಸಾವಿರದ ಮುನ್ನೂರ ತ್ತೊಂಬತ್ತೊಂಬತ್ತು ಆಗಿರ ಸಂವತ್ಸರದ ಶ್ರಾವಣ ಶುದ್ಧ 1 ರಲ್ಲಿ ಶ್ರೀಮಾನ್ ಮಹಾಮಂಡಲೇಶ್ವರ ಶ್ರೀ ವೀರಚಿಕ್ಕವೊಡೆಯರು ಹೋರಿಸದೇ ವೊಡೆಯರಿಗೆ ಕೊಟ್ಟ ಧರ್ಮ ಸಾದನದ ಕ್ರಮವೇನೆಂದರೆ[18] ನಮ್ಮ ಮನೆಗೆ ಸಲುಹ ಅರಸನಕೆರೆಯ ಸೀಮೆಯ ಹುಲಿವಾನದ ಸ್ಥಳದಲ್ಲಿ ಹುಲಿವಾನದಲ್ಲಿ ಪೂರ್ವ ದಲ್ಲಿ ಲಿಂಗಮುದ್ರೆ ಕಲ್ಲಿಟ್ಟು (ಬಂದಿದೆ ಸಾಮಾನ್ಯವಾಗಿ ಶೈವಧರ್ಮದ ಶಾಸನಗಳಿಗೆ ಲಿಂಗಮುದ್ರೆ ಪದಬಳಕೆ ಮಾಡುವರು. ಈ ಲಿಂಗಮುದ್ರೆ ಎನ್ನುವುದು ಒಂದು ಚಿನ್ಹೆಯಾಗಿದ್ದು ಶೈವಧರ್ಮದ ಏಳಿಗೆಗಾಗಿ ಕೊಟ್ಟ ಭೂಮಿಯನ್ನು ಲಿಂಗ ಮುದ್ರೆಯನ್ನು ನೆಡುವುದರ ಮೂಲಕ ಸೂಚಿಸುವರು)

ಬಡಗಣ ಕೋಟೆಯಲ್ಲಿ ಒಂದು ಕೆರೆಯನ್ನು ಆ ಸ್ಥಳದಲ್ಲಿ ಲಿಂಗಮುದ್ರೆಯ ಕೊಟ್ಟಿದ್ದನ್ನು ಊರ್ಜಿತ ಮಾಡಿ ಅದನ್ನು ಬಿಟ್ಟು ನಾವು ಹುಲಿವಾನ ಸ್ಥಳದ ಚಾಮಲಾಪುರವನ್ನು ನಾವು ಸುಧರ್ಮ ಪುರವಾಗಿ ಕೊಡುತ್ತಿದ್ದೇವೆ. ಈ ಪುರಕ್ಕೆ ಸಲ್ಲುವ ಚತುರ ಸೀಮೆಯಲ್ಲಿರುವ ಗದ್ದೆ ಬೆದಲು ಆಣೆ ಅಚ್ಚುಕಟ್ಟು ಕಟ್ಟೆ ಕಾಲುವೆ ಸರ್ವ ಸಾಮ್ಯವನ್ನು ಅನುಭವಿಸಬಹುದು ಎಂದು ಶ್ರೀ ವೀರಚಿಕ್ಕವೊಡೆಯರು ಬರೆದುಕೊಟ್ಟ ದಾನ ಶಾಸನವಾಗಿದೆ. ಹಾಗೆಯೇ ಇದಕ್ಕೆ ತಪ್ಪಿದರೆ ಬಹುಶಃ ಆದಾಯವನ್ನು ಒಳ್ಳೆಯ ಕಾರ್ಯಕ್ಕೆ ಅಥವಾ ದೇವರ ಕಾರ್ಯಕ್ಕೆ ಉಪಯೋಗಿಸದಿದ್ದರೆ ಗಂಗೆಯ ತಡಿಯಲಿ ಕಪಿಲೆಯನ್ನು ಕೊಂದರೆ ಏನು ಶಿಕ್ಷೆ ಅನುಭವಿಸಬೇಕೋ ಆ ಶಿಕ್ಷೆಯನ್ನು ಅನುಭವಿಸುವರು ಹಾಗೂ ತಂದೆ - ತಾಯಿ ಗೋವನ್ನು ಕೊಂದರೆ ಏನು ಶಿಕ್ಷೆಯೋ ಅದನ್ನು ಅನುಭವಿಸುವರು ಎಂದು ಶಾಸನದ ಕೊನೆಯಲ್ಲಿ ಅದರ ದುರ್ಬಳಕೆಯಿಂದಾಗುವ ಅನಾಹುತವನ್ನು ತಿಳಿಸಿದ್ದಾರೆ.

## ಹುಲಿವಾನ

ಹುಲಿವಾನ ಮಂಡ್ಯ ಜಿಲ್ಲಾ ಕೇಂದ್ರದಿಂದ ಕೆರಗೋಡು ಮಾರ್ಗದಲ್ಲಿ ಏಳು ಕಿ.ಮೀ. ದೂರದಲ್ಲಿ ಹುಲಿವಾನ ಗ್ರಾಮವಿದೆ ಸುಮಾರು ಒಂಭತ್ತು ಸಾವಿರಕ್ಕೂ ಹೆಚ್ಚು ಜನಸಂಖ್ಯೆವುಳ್ಳ ಈ ಗ್ರಾಮಕ್ಕೆ ಸೇರಿದ ಜನತಾ ಕಾಲೋನಿ ಒಂದು ಕಿ.ಮೀ. ದೂರದಲ್ಲಿದೆ ಬಹು ಸಂಖ್ಯಾತರು ಒಕ್ಕಲಿಗರು.

ಹುಲಿವಾನವಿರುವ ಪ್ರದೇಶ ಹಿಂದೆ ಕಾಡಾಗಿತ್ತು ಈ ಕಾಡಿನಲ್ಲಿ ಹುಲಿಗಳು ವಾಸವಾಗಿದ್ದರಿಂದ ಅದಕ್ಕೆ 'ಹುಲಿವನ' ಎಂಬ ಹೆಸರಿತ್ತು. ಕೆಲ ಶತಮಾನಗಳ ಹಿಂದೆ ಬಳ್ಳಾರಿ ಕಡೆಯಿಂದ ವಲಸೆ ಬಂದ ಒಕ್ಕಲಿಗರು ಇಲ್ಲಿ ಮೂರು ಕಡೆ ನೆಲೆಸಿದ್ದರು. ಈ ಊರಿಗೆ ಮೂರು ಮೂಲೆ ಹುಲಿವಾನ ಎಂದು ಕರೆಯುತ್ತಿದ್ದರು. ಕಾಡಿನ ಪ್ರದೇಶವಾಗಿದ್ದ ಈ ಊರಿನ ರಕ್ಷಣೆಗಾಗಿ ಕಾವಲು ಭೈರವ ಎಂಬ ಮಹಾಪುರುಷ ಇದ್ದನೆಂದು ಆ ಪುರುಷ ಹುಲಿಯನ್ನು ಕೊಂದು ಅದನ್ನು ಸಮಾಧಿ ಮಾಡಿದನೆಂದು ತಿಳಿದುಬರುತ್ತಿದೆ. ಊರಿನ ಈ ರಕ್ಷಕನ ನೆನಪಿಗಾಗಿ ದೇವಾಲಯ ಕಟ್ಟಿರಬೇಕು. ಮೊದಲು ಈ ದೇವಾಲಯಕ್ಕೆ ಕಾವಲು ಭೈರವ ದೇಗುವ ಎಂಬ ಹೆಸರಿತ್ತು. ಕ್ರಮೇಣ ಕಾಲಭೈರವೇಶ್ವರ ಎಂಬ ಹೆಸರು ಬಂದಿದೆ. ಈ ದೇಗುವ ಮುಂಭಾಗವೇ ಹುಲಿ ಸಮಾಧಿ ಇದ್ದು ಹದಿನೈದು ವರ್ಷಕ್ಕೊಮ್ಮೆ ನಡೆಯುವ

ಕಾಲ ಭೈರವೇಶ್ವರ ಹಬ್ಬದ ದಿನದಂದು ಹುಲಿ ಸಮಾಧಿಗೆ ಈಗಲೂ ಪೂಜೆ ಮಾಡುವ ಪದ್ಧತಿ ಇದೆ ದೇವಾಲಯದ ಪ್ರಕಾರದ ಪ್ರವೇಶ ಮಂಟಪದ ಮೇಲೆ ಹುಲಿಯ ಪ್ರತಿಮೆಯನ್ನು ನಿರ್ಮಿಸಲಾಗಿದೆ.

ಈ ಗ್ರಾಮದ ಪ್ರಾಚೀನ ದೇವಾಲಯ ಎಂದರೆ ಈಶ್ವರ ದೇವಾಲಯ ಮುಜರಾಯಿ ಇಲಾಖೆಗೆ ಸೇರಿದ್ದರೂ ಊರಿನವರ ಹಾಗೂ ಇಲಾಖೆಯವರ ನಿರ್ಲಕ್ಷ್ಯದಿಂದಾಗಿ ಸಂಪೂರ್ಣ ಶಿಥಿಲಗೊಂಡಿದೆ. ಕೆಲವೇ ತಿಂಗಳಲ್ಲಿ ಕುಸಿದು ಬೀಳುವ ಸ್ಥಿತಿಗೆ ಬಂದಿದೆ. ಈ ದೇಗುಲದ ಗರ್ಭಗೃಹದಲ್ಲಿ ಲಿಂಗವಿದ್ದರೂ ಬಾಗಿಲೇ ಇಲ್ಲ.

ಊರಿನ ಇತಿಹಾಸದ ಕುರುಹುಗಳಾದ 14-15ನೇ ಶತಮಾನಕ್ಕೆ ಸೇರಿದ ಹದಿನೈದಕ್ಕೂ ಹೆಚ್ಚು ವೀರಗಲ್ಲುಗಳು ಕಾಲಭೈರವೇಶ್ವರ ದೇಗುಲದ ಆವರಣದಲ್ಲಿವೆ. ಕೆಲವು ನಿಲ್ಲಿಸಲಾಗಿದ್ದರೂ ಹೆಚ್ಚು ವೀರಗಲ್ಲು ಅಸ್ತವ್ಯಸ್ತವಾಗಿ ಗುಡ್ಡೆಯಾಗಿ ಬಿದ್ದಿರುವುದು ದುರಾದೃಷ್ಟ.

ಊರ ಬಾಗಿಲಿನ ಪೂರ್ವಕ್ಕೆ ಇರುವ ವೀರಗಲ್ಲು ವಾಸರಾಯನ ಸರಣಾರ್ಥವಾಗಿ ಕೆತ್ತಿಸಲ್ಪಟ್ಟಿದೆ. ಉತ್ತಮ ಸ್ಥಿತಿಯಲಿಲ್ಲ ಮುರಿದಿದೆ ಸ್ಥಾಪಿತ ದಿನಾಂಕ ವಿಕಾರಿಸಂವತ್ಸರದ ವೈಶಾಖ ಸು 10 ಸೋಮರಾರ.[19]

## ಮುದ್ದನಗೆರೆ :

ಜಿಲ್ಲಾ ಕೇಂದ್ರ ಮಂಡ್ಯದಿಂದ ಕೀಲಾರ ಮಾರ್ಗವಾಗಿ ಹದಿನೇಳು ಕಿ.ಮೀ. ದೂರದಲ್ಲಿ ಮುದ್ದಂಗೆರೆ ಗ್ರಾಮವಿದೆ. ಕೆರಗೋಡು ಕ್ಷೇತ್ರಕ್ಕೆ ಸೇರುವ ಈ ಗ್ರಾಮ ಮಂಡ್ಯ ತಾಲ್ಲೂಕಿಗಡಿಯಲ್ಲಿದೆ. ಸುಮಾರು 800 ಮಂದಿ ವಾಸವಾಗಿರುವ ಈ ಕುಗ್ರಾಮ ಆಲಕೆರೆ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರಿದೆ.

ಈ ಗ್ರಾಮದಲ್ಲಿ ಬಸವೇಶ್ವರ ದೇವಸ್ಥಾನದ ಮುಂದೆ ತಮಿಳು ಶಾಸನವಿದೆ. 13ನೇ ಶತಮಾನದ ಈ ಶಾಸನ ಹೊಯ್ಸಳರ ಮೂರನೇ ನರಸಿಂಹನ ಕಾಲಾವಧಿಯದು. ಶಾಸನದ ಕಾಲಾವಧಿ ವ್ಯಾಸ ಸಂವತ್ಸರ ಸು. 11 ಶನಿವಾರ ರೋಹಿಣಿ ನಕ್ಷತ್ರ ಕ್ರಿ.ಶ. 1286 ಡಿಸೆಂಬರ್ 28.[20]

ಮುರುದೂರಿನ (ಬಹುಶಃ ಮದ್ದೂರಿರಬೇಕು) ನರಸಿಂಹನು ಗ್ರಾಮ ಸಭೆಯ ಕಾನೂನು ರೀತ್ಯ ಇಲ್ಲಿಯ ಭೂಮಿಯನ್ನು ನಾಲ್ಕು ವಿಭಾಗವಾಗಿ ವಿಂಗಡಿಸಲಾಗಿತ್ತೆಂದು ತಿಳಿದು ಬರುತ್ತದೆ. ಮುದ್ದುಪಟ್ಟಣ. ಈಚಲು ಪೇಟೆ, ಪೇರುಪೇಟೆ ಇರಬಹುದು ಮತ್ತೊಂದು ಉತ್ತರ ದಿಕ್ಕಿನಲ್ಲಿ ಇದ್ದಿರಬಹುದು. ಪಟ್ಟಣ ಮತ್ತು ಪೇಟೆ ಪ್ರಯೋಗದ ಶಬ್ದ ವಿರುವುದರಿಂದ ಹಿಂದೆ ಪಟ್ಟಣವಾಗಿದ್ದು ವ್ಯಾಪಾರ ಕೇಂದ್ರವಾಗಿತ್ತೆಂದು ಹೇಳಬಹುದು.

### ರಾಯಶೆಟ್ಟಿಪುರ :

ಜಿಲ್ಲಾ ಕೇಂದ್ರ ಮಂಡ್ಯದಿಂದ ಕೆರಗೋಡು ಹಲ್ಲೆಗೆರೆ ಮಾರ್ಗವಾಗಿ ಚಂ ದಗಾಲು ಗ್ರಾಮದ ಹತ್ತಿರ ಪೂರ್ವದಿಕ್ಕಿನ ದಾರಿಯಲ್ಲಿ ಹೋದರೆ ರಾಯಶೆಟ್ಟಿ ಪುರಕ್ಕೆ ಸುಮಾರು 24 ಕಿ.ಮೀ. ದೂರವಿದೆ. ಕೆರಗೋಡು ಕ್ಷೇತ್ರದ ಚಂದಗಾಲು ಗ್ರಾಮ ಪಂಚಾಯಿತಿಗೆ ಸೇರಿದ ಈ ಗ್ರಾಮ ಮಂಡ್ಯ ತಾಲ್ಲೂಕಿನ ಗಡಿಯಲ್ಲಿದೆ. ಒಂದೂವರೆ ಸಾವಿರ ಜನಸಂಖ್ಯೆ ಇರುವ ಇಲ್ಲಿ ಬಹುಸಂಖ್ಯಾತರು ಒಕ್ಕಲಿಗರು.

ಈ ಗ್ರಾಮದಲ್ಲಿರುವ ಈಶ್ವರ ಹಾಗೂ ವೀರಭದ್ರೇಶ್ವರ ದೇಗುಲಗಳನ್ನು ಚೋಳರು ಒಂದೇ ರಾತ್ರಿಯಲ್ಲಿ ನಿರ್ಮಿಸಿದರೆಂಬ ನಂಬಿಕೆ ಇದೆ. ಗ್ರಾಮದ ಸೋಮೇಶ್ವರ ದೇವಸ್ಥಾನದ ಪೂರ್ವಕ್ಕೆ ನಿಂತಿರುವ ಶಾಸನವು ಈ ಗ್ರಾಮವು ಶಿವಪುರವಾದ ಬಗ್ಗೆ ವಿವರಿಸುತ್ತದೆ. ಈ ಶಾಸನದ ಕಾಲಾವಧಿ ಶಕ 1107, ವಿಶ್ವವಸು ಚೈತ್ರ ಸು. 1 ಮಂಗಳವಾರ [21] ಈ ಶಾಸನವು ಧರ್ಮ ಸಂರಕ್ಷಣೆಗಾಗಿ ಆತ್ಮಾರ್ಪಣೆ ಮಾಡಿಕೊಂಡ ಅಪರೂಪದ ಘಟನೆಯೊಂದನ್ನು ತಿಳಿಸುತ್ತದೆ. ಶಾಸನದ ಪ್ರಕಾರ ರಾಯಶೆಟ್ಟಿಪುರ ಕೆರಗೋಡು ನಾಡಿಗೆ ಸೇರಿತ್ತು.

ಕೆರಗೋಡು ನಾಡಿಗೆ ಸೇರಿದ ಬಿದಿರು ಕೋಟೆಯ ಮಲ್ಲೆಯ ನಾಯಕ ಮತ್ತು ಸೋಮನಾಯಕ ಎಂಬಿಬ್ಬರು ತಮ್ಮ ಹಳ್ಳಿಯನ್ನು ಶಿವಪುರವಾಗಿ ಪರಿವರ್ತಿಸಿ ಅದನ್ನು ಶಿವಭಕ್ತರಿಗೆ ನೀಡಿದರು. ಆದರೆ 70 ವರ್ಷಗಳ ತರುವಾಯ ಅಂದರೆ ಕ್ರಿ.ಶ. 1251 ರಲ್ಲಿ ಹೊಯ್ಸಳ ಸೋಮೇಶ್ವರನು ಕಣ್ಣಾನೂರಿನಿಂದ ಆಳುತ್ತಿದ್ದಾಗ ಮಾದೆಯ ನಾಯಕನೆಂಬಾತನು ಅದು ಶಿವಪುರ ವಾಗುವುದನ್ನು ಬಲವಾಗಿ ವಿರೋಧಿಸಿದನು ಇದರಿಂದ ಶಿವಭಕ್ತರು ತಮಗೆ ಲಭಿಸಿದ್ದ ವೃತ್ತಿಗಳನ್ನು ಅನುಭವಿಸಲು

ಅಡ್ಡಿಯಾಯಿತೆಂದು ತೋರುತ್ತದೆ. ಈ ಸಂಗತಿ ಅಲ್ಲಿನ ಶಿವಭಕ್ತರನ್ನು ಕಂಗೆಡೆಸಿತು. ಆಗ ವೀರಮಲ್ಲಾಯ್ಯನೆಂಬಾತನು ತನ್ನನ್ನು ತಾನೇ ಚುಚ್ಚಿಕೊಂಡು ಆತ್ಮಾರ್ಪಣೆ ಮಾಡಿಕೊಂಡನು. ಈ ಘಟನೆಯಿಂದ ಮಾದೆಯ ನಾಯಕನನು ಮಣಿಯ ಬೇಕಾಯಿತು. ಕೊನೆಗೆ ಶಿವಪುರವನ್ನು ಶಿವಭಕ್ತರಿಗೆ ಬಿಟ್ಟುಕೊಟ್ಟನು. ಅದಕ್ಕೆ ಸೋಮನಾಥಪುರ ಎಂಬ ಹೆಸರಿಟ್ಟನೆಂದು ಶಾಸನದಿಂದ ತಿಳಿದುಬರುತ್ತದೆ.

ರಾಯಶೆಟ್ಟಿ ಪುರಕ್ಕೆ ಎರಡು ಕಿ.ಮೀ. ದೂರದಲ್ಲಿ ಈ ಗ್ರಾಮಕ್ಕೆ ಸೇರಿದಂತೆ ತ್ರಿಯೆಂಬಕಪುರವಿದೆ. ತ್ರಿಯಂಬಕ ಎಂದರೆ ಶಿವ ಎಂದರ್ಥ. ತ್ರಿಯೆಂಬಕಪುರವೇ ಅಂದಿನ ಕಾಲದ ಶಿವಪುರವೇ ಆಗಿರಬೇಕು ತ್ರಿಯಂಬಕಪುರ ಎಂಬ ಹೆಸರು ಈಗಲೂ ಚಾಲ್ತಿಯಲ್ಲಿದ್ದರೂ ಊರು ಇಲ್ಲ. ಊರು ಇತ್ತು ಎಂಬ ಕುರುಹು ಇಲ್ಲ ಅಂದಿನ ಕಾಲದ ಮರದ ಹತ್ತಿರ ತಿಮ್ಮಪುರದ ಅಮ್ಮ ಹಾಗೂ ಆಂಜನೆಯ ದೇಗುಲಗಳಿವೆ. ಊರಿನಲ್ಲಿರುವ ಈಶ್ವರ ದೇಗುಲವನ್ನು ಸೋಮೇಶ್ವರ ಎಂದು ಕರೆಯುತ್ತಾರೆ. ಈ ದೇವರ ಹೆಸರಿನ ಹಿನ್ನಲೆಯಲ್ಲಿ ಸೋಮನಾಥಪುರ ಎಂದು ಹೆಸರಿದ್ದು ಅಂದು ಈ ಗ್ರಾಮ ಪಟ್ಟಣವಾಗಿದ್ದಂತೆ ಕಂಡು ಬರುತ್ತದ. ಅಂದಿನ ಸೋಮನಾಥಪುರವೇ ಇಂದು ರಾಯಶೆಟ್ಟಿಪುರವಾಗಿದೆ.

ಮಾದೆಯನಾಯಕನು ಶಿವಪುರವನ್ನು ಮತ್ತೆ ಶಿವಭಕ್ತರಿಗೆ ಬಿಟ್ಟುಕೊಟ್ಟು ಹಲವಾರು ವ್ರಿತಿಗಳನ್ನು (ಗಣ) ವಿಭಾಗ ಮಾಡಿ ಅವನ್ನು ಶಿವಭಕ್ತರಿಗೆ ಹಂಚಿದನು. ಅಸಂಖ್ಯಾತ ಮಹಾಗಣಗಳು ಮುಖ್ಯವಾಗಿ ವೀರಭದ್ರದೇವರು ಮುಖ್ಯರಾದ ವೀರ ಸೋಮನಾಥಪುರದ ಗಣವಂತರು ಸೋಮನಾಥಪುರದ ವ್ರಿತ್ತಿ

ಸ್ತಾನಪತಿ ಮಾದಿರಾಜರುಗಳಿಗೆ ವ್ರಿತ್ತಿ -2

ಕೆರಸ್ತಳದ ಬಸವಿದೇವಂಗೆ ವ್ರಿತ್ತಿ -2

ನೀಲಕಂಠದೇವರಿಗೆ ವ್ರಿತ್ತಿ - 2

ಸ್ತೇನುಬೋವ ಸಿದ್ದಯ್ಯನಿಗೆ -2

ಅಪ್ಪಯಗೆ ವ್ರಿತ್ತಿ -2

ನಾರಿದೇವನ ಕುಮಾರ ಮಾದಯ್ಯಗೆ ವ್ರಿತ್ತಿ -2

ಸಂಭುದೇವಂಗೆ ವ್ರಿತ್ತಿ -1

ವೃತ್ತಮಾಂಗದ ಮಲ್ಲದೇವಗೆ ವ್ರಿತ್ತಿ -1

ಬಸವಿ ದೇವನ ಕಲ್ಲಯ್ಯಂಗೆ ವ್ರಿತ್ತಿ -1

ಹರದಯ್ಯನ ಮಗ ಮುತ್ತುಗೆರೆಯ ಸೋಮಯ್ಯಗೆ ವ್ರಿತ್ತಿ -1

ಬೈಚವ್ವೆಯ ಮಗ ಕುಂಬಯ್ಯಂಗೆ ವ್ರಿತ್ತಿ -1

ವಿರಟಯ್ಯಯ ಮಗ ಕೇತಯ್ಯರಿಗೆ ವ್ರಿತ್ತಿ -1

ತಾನೇಶ್ವರ ಚಾಮಯ್ಯಂಗೆ ವ್ರಿತ್ತಿ -1

ಕಿಳಕಿಯ ಸೋಮಯ್ಯಂಗೆ ವ್ರಿತ್ತಿ -1

ಹೆಂದಡೆ ಸಿಂಗಯ್ಯನ ಮಾರಯ್ಯ ಪ್ರಮಥಯ್ಯನ ಮಗ

ಅಚಯ್ಯನ ವೀರಯ್ಯಗೆ ವ್ರಿತ್ತಿ -1

ನೀಲ ಕಂಠದೇವನ ಮಗ ಚಾಮಯ್ಯರಿಗೆ ವ್ರಿತ್ತಿ -1

ಪಟ್ಟೆಯ್ಯ ತಿಪ್ಪಯ್ಯಂಗೆ ಅರ್ದ್ಧ ಕಠಾರ ಸಂಭುದೇವ ಅರ್ದ್ಧ

ಮಲ್ಲಯ್ಯನ ಮಗ ಮೊಟಯ್ಯ ವ್ರಿತ್ತಿ -1

ಚವುಡೋಜ ಅರ್ಧ ವ್ರಿತ್ತಿ ಸಂಕಯ್ಯನ ಮಗ ದೊಡ್ಡ ಮಾರಯ್ಯ ವ್ರಿತ್ತಿ -1

ಜಡೆಯ ಮಲ್ಲಯ್ಯ ಅರ್ಧ ಸಂಗಮದೇವರ ಮಾದಯ್ಯಗೆ ವ್ರಿತ್ತಿ -1

ಪಾಡುವ ಮಲ್ಲಯ್ಯನಾಯಕ ಅರ್ಧ, ಮಲಿಕಿಳಕಿಯ ಸೇಮಯ್ಯ ಅರ್ಧ, ಪೋತಯ್ಯನ ಮಗ ದೊಡ್ಡ ಮಾದಯ್ಯ ಅರ್ಧ ಮಲ್ಲಯ್ಯನ ಮಗ ಕಲ್ಲಯ್ಯನು ವೀರಯ್ಯನ ವ್ರಿತ್ತಿ ತವರದ ಮಾದಿಶೆಟ್ಟಿಯ ಮಗಳು ಚಂಗಣವೆ ಮಾದವ್ವೆಗೆ ವ್ರಿತ್ತಿ -1 ಹೀಗೆ ಹಲವು ಭಕ್ತರಿಗೆ ಹಂಚಿ ಇವರ ಹೆಣ್ಣು ಮಕ್ಕಳು ಹೆಂಡಿರು ತೊತ್ತಿನ ಮಕ್ಕಳು ಭಕ್ತರಾಗಿ ಅನುಭವಿಸುವರು. ಈ ಧರ್ಮವನ್ನು ಯಾರು ಪರಿಪಾಲಿಸುವುದಿಲ್ಲವೋ ಪಾಪಕ್ಕೆ ಗುರಿಯಾಗುವರೆಂದು ಬರೆದು ಕೊಟ್ಟ ಶಾಸನವಾಗಿದೆ.

ದೇವಾಲಯ : ವೀರಭದ್ರೇಶ್ವರ, ಈಶ್ವರ (ಸೋಮೇಶ್ವರ) ದೇಗುಲಗಳು ಹಳೆಯವು ಸೋಮೇಶ್ವೇರ ದೇಗುಲ ಚೋಳ ಇಲ್ಲವೇ ಹೊಯ್ಸಳರ ಕಾಲದಲ್ಲಿ ನಿರ್ಮಾಣ ಪ್ರಾರಂಭವಾಯಿತ್ತಾದರೂ ಸೋಮೇಶ್ವರ ಹಾಗೂ ವೀರಭದ್ರೇಶ್ವರ ದೇವಾಲಯಗಳ ಪೂರ್ಣ ರಚನೆ ವಿಜಯನಗರ ಕಾಲದ್ದೆಂದು ತಿಳಿದು ಬರುತ್ತದೆ. ಇದು ಈ ದೇವಾಲಯ ಜೀರ್ಣೋದ್ಧಾರಗೊಂಡು ಆಧುನಿಕ ರೂಪ ಪಡೆದಿದೆ. ಆದರೂ ಒಳಭಾಗದಲ್ಲಿ ಪಾರಂಪರಿಕ ಕಟ್ಟಡವನ್ನು ಉಳಿಸಿಕೊಳ್ಳಲಾಗಿದೆ. ಆಳೆತ್ತರದ ವೀರಭದ್ರೇಶ್ವರ ಮೂರ್ತಿ ಮನಮೋಹಕವಾಗಿದೆ.

## ಹೊಸಬೂದನೂರು :

ತಾಲ್ಲೂಕು ಕೇಂದ್ರ ಮಂಡ್ಯದಿಂದ ಐದು ಕಿ.ಮೀ. ದೂರದಲ್ಲಿದೆ. ಇದೊಂದು ಚಿಕ್ಕ ಗ್ರಾಮ. ಈ ಗ್ರಾಮವು ಹಿಂದೆ ಅಗ್ರಹಾರವಾಗಿತ್ತು. (ಹೊಯ್ಸಳರ ಕಾಲದಲ್ಲಿ) ಈ ದೇವಾಲಯದಲ್ಲಿ ಶೈವ ಮತ್ತು ವೈಷ್ಣವ ಎರಡೂ ಧರ್ಮಕ್ಕೂ ಪ್ರಾಧಾನ್ಯತೆ ನೀಡುವಂತೆ ಕಾಶೀವಿಶ್ವೇಶ್ವರ ಮತ್ತು ವಿಷ್ಣುವಿನ ದೇವಾಲಯವನ್ನು ಕಾಣಬಹುದು. ಹೊಸಬೂದನೂರಿನಲ್ಲಿ ಮೂರು ಶಾಸನಗಳು ದೊರೆತಿವೆ. ಕೇಶವ ದೇವಸ್ಥಾನದ ಒಳಗಡೆ ದಕ್ಷಿಣಕ್ಕಿರುವ ಶಾಸನ ಹೊಯ್ಸಳರ 3ನೇ ವೀರ ನರಸಿಂಹನ ಕಾಲಾವಧಿಯದು, ಶಕವರ್ಷ ಕ್ರಿ.ಶ. 1198 ದಾತು ಸಂವತ್ಸರ ಸು. 1 ಸೋಮವಾರ.[22] ಕಾಲಾವಧಿಯೆಂದು ಈ ಶಾಸನದಲ್ಲಿ ಕೇಶವ ದೇವಾಲಯಕ್ಕೆ ದತ್ತಿ ಬಿಟ್ಟ ವಿಚಾರವನ್ನು ತಿಳಿಸುತ್ತದೆ. ಉದ್ಭವ ಸರ್ವಜ್ಞ ಪದ್ಮನಾಭಪುರವಾದ ಬೂದನೂರಿನ ಮಹಾ ಜನಗಳಿಗೆ ಯಾದವ ನಾರಾಯಣಪುರವಾದ ಗುತ್ತಲಿನ ಕೇಶವ ದೇವರ ಸ್ಥಾನಿಕ

ಪುರುಷೋತ್ತಮದೇವ ಹಾಗೂ ನಂಬಿಪಿಳ್ಳೆಯರು ಸಂಯುಕ್ತವಾಗಿ ಗುತ್ತಲಿನ ಮರಕಾಡುಗಳುಳ್ಳ ಪ್ರದೇಶವನ್ನು ದತ್ತಿ ನೀಡಿ ಕೇಶವ ದೇವ ರ ಅಮೃತ ಪಡಿಗೆಂದು ಪ್ರತ್ಯೇಕವಾಗಿ ದಾನಬಿಟ್ಟ ಅಂಶವನ್ನು ತಿಳಿಸುತ್ತದೆ. ಬರೆದು ಕೊಟ್ಟ ಶಾಸನದಂತೆ ಈ ದೇವಕಾರ್ಯವನ್ನು ಮುಂದುವರಿಸಿಕೊಂಡು ಬರುವವರು ಭೂಮಿಯ ಮೇಲಿರುವ ಎಲ್ಲಾ ಫಲ ಲಭಿಸುವುವು. ಕೆರೆಯ ಕಟ್ಟಿಕೊಂಡು ಕಾಲುವೆಯನ್ನು ತಂದುಕೊಂಡು, ಸಂತಾನವನ್ನು ಹೊಂದಿ ಬೋಗಿಸುವರು ವರ್ಷಂ ಪ್ರತಿ 10 ಗದ್ಯಾಣ ಕೊಡುವ ಗುತ್ತಿಗೆ ಹಾಗೂ ಆ ದೇವರ ಚೈತ್ರ ಪವಿತ್ರದ ಹಬ್ಬಕ್ಕೆ ಪ್ರತಿವರ್ಷ ನೂಲು ಹಲ, ಹತ್ತು ಅಕ್ಕಿ ಕೊಳಗ, ಹತ್ತು ಕೊಳಗ ಬೆಣ್ಣೆಯನ್ನು ಸೂರ್ಯಚಂದ್ರರಿರುವ ತನಕ ಬೋಗಿಸುವಂತೆ ಮಾಡಿ ಕೊಟ್ಟ ಶಾಸನವಾಗಿದೆ. ಕೊಟ್ಟಂತಹ ಈ ದಾನಕ್ಕೆ ಸಾಕ್ಷಿ ಎಂಬಂತೆ ವೀರನರಸಿಂಹಪುರ (ಮದ್ದೂರು) ಅನಾಧಿ ಅಗ್ರಹಾರ, ಹಿರಿಯ ಅರಸನ ಕೆರೆ ಅಗ್ರಹಾರ ಮಂಡೆಯ ಹಾಗೂ ಅಗ್ರಹಾರ ಮಲ್ಲಿಕಾರ್ಜುನಪುರ (ಗುತ್ತಲು)ಗಳ ಮಹಾಜನರನ್ನು ಸಾಕ್ಷಿಯಾಗಿ ದಾಖಲಿಸಿದೆ.

ಕಾಶಿವೀರೇಶ್ವರ ದೇವಸ್ಥಾನದ ವಿಮಾನದ ಉತ್ತರ ಭಿತ್ತಿಯ ಮೇಲಿರುವ ಶಾಸನ ತೆಲಗು ಭಾಷೆಯಲ್ಲಿದ್ದು ಈ ಶಾಸನವು ಕಾಶೀ ವಿಶ್ವೇಶ್ವರ ದೇವಾಲಯಕ್ಕೆ ಭೇಟಿ ಕೊಟ್ಟ ಭಕ್ತರ ಹೆಸರನ್ನು ದಾಖಲಿಸಿದೆ. ಬಾದ್ರಪದ ಚೌಳ 3 ಶನಿವಾರಂನಾಡು ಶ್ರೀಮತ ಕಾಸಿವಿಸ್ವೇಸ್ವರಸ್ವಾಮಿವಾರಿ ದಿವ್ಯಶ್ರೀ ಪಾದಪದ್ಮಲು ದರಿದ್ರನಂ ಶೇನಿರು ಪಾಚ್ಚನನಂ, ಸಿದ್ದೈಯ್ಯ, ಯಲ್ಲಯ್ಯ, ಕಾಳೈಯ್ಯ ಅಂದರೆ ಭಕ್ತರ ಹೆಸರನ್ನು ಉಲ್ಲೇಖಿಸಿದೆ.

ಅನಂತಪದ್ಮನಾಭ ದೇವಸ್ಥಾನದ ಒಳಗೆ ರಂಗಮಂಟಪದ ಬುಡದಲ್ಲಿ ಶಾಸನವಿದೆ. ಕಾಮಯ್ಯ ಎಂಬುವವರ ಮಗ ಮಲ್ಲರಸಯ್ಯ ಎಂಬ ಹೆಸರಿನ ಉಲ್ಲೇಖವಿದೆ ಹೆಚ್ಚಿನ ವಿವರಗಳಿಲ್ಲ.

ಈಶ್ವರ ದೇವಾಲಯ:

ಈಶ್ವರ ದೇವಾಲಯವನ್ನು ಕಾಶೀವಿಶ್ವೇಶ್ವರ ದೇವಾಲಯ ಎಂತಲೂ ಕರೆಯುವರು. ದೇವಾಲಯವನ್ನು ಬಳಪದ ಕಲ್ಲಿನಿಂದ ಕಟ್ಟಲಾಗಿದ್ದರಿಂದಾಗಿ ಬಹಳಷ್ಟು ಶಿಥಿಲಗೊಂಡಿವೆ. ಇದೊಂದು ಏಕಕೂಟ ದೇವಾಲಯ ಒಂದು ಗರ್ಭಗುಡಿ ಒಂದು ಸುಖನಾನಿ ಮತ್ತು ನವರಂಗ ಮತ್ತು

ಮುಖಮಂಟಪವನ್ನು ಹೊಂದಿದೆ. ದೇವಾಲಯ ಜಗತಿಯ ಮೇಲೆ ನಿರ್ಮಾಣಗೊಂಡಿದೆ. ಕೆಳಗಿನ ಮೂರು ಮಡಿಕೆಗಳು ಹಲ್ಲಿನ ಮಾದರಿಯ ರಚನೆಯನ್ನು ಹೊಂದಿದೆ. ಛಾವಣಿಯ ಕೆಳಗಿನ ಅಲಂಕಾರವು (ಕಪೋತ)ಸೂಕ್ಷ್ಮವಾಗಿದೆ ಮತ್ತು ಎದ್ದು ಕಾಣವಂತಿದೆ. ಭಿತ್ತಿಯಲ್ಲಿ ಯಾವುದೇ ಕುಶಲತೆ ಕಂಡು ಬರವುದಿಲ್ಲ ಕೆತ್ತನೆಗಳಲ್ಲಿ ಚೌಕಸ್ತಂಭ ಹಾಗೂ ಚಿಕ್ಕ ಚಿಕ್ಕ ಗೋಪುರಾಕೃತಿಯ ಗೂಡಿನ ಚಿತ್ರವನ್ನು ಹೊಂದಿದೆ. ಚೌಕಸ್ತಂಭದ ಮೇಲ್ಭಾಗದ ಸೂರು ಆಧುನಿಕ ಕುಶಲತೆಯನ್ನು ಹೊಂದಿದೆ. ಇವು ಸೂಕ್ಷ್ಮ ಕುಶಲತೆಯಿಂದ ಕೂಡಿದೆ. ಇವುಗಳ ಮೇಲ್ಭಾಗ ಮತ್ತೆ ಗೋಪುರಾಕೃತಿಯನ್ನು ಕಾಣಬಹುದು. ಇವು ಚೌಕಸ್ತಂಭಗಳ ರಕ್ಷಣೆಯನ್ನು ಪಡೆದಂತಿವೆ. ಶಿಖರವು ಎತ್ತರವಾಗಿದೆ. ಸೂರಿಗೆ ಸಮನಾಂತರವಾಗಿ ರಚನೆಯಾಗಿದೆ ಇಂದು ಶಿಖರ ಶಿಥಿಲವಾಗಿದೆ.

**ಗರ್ಭಗೃಹ:**

ಗರ್ಭಗೃಹವು ಚೌಕಾರವಾಗಿದೆ ಸುಂದರವಾದ ದ್ವಾರವನ್ನು ಹೊಂದಿದೆ ದ್ವಾರದಲ್ಲಿ ದ್ವಾರಪಾಲಕರನ್ನು ನಿಲ್ಲಿಸಿದೆ. ಲಲಾಟಬಿಂಬದಲ್ಲಿ ಶಿವನ ನರ್ತನವನ್ನು ಕೆತ್ತಿದ್ದಾರೆ. ಗರ್ಭ ಗೃಹದ ಮೇಲ್ಛಾವಣಿ ಸಮಾನಂತರವಿದೆ ಹೆಬ್ಬಾಗಿಲು ಗುಲಾಬಿಯ ಗೊಂಚಲಿನ ರಚನೆಯಿದೆ ಪಶ್ಚಿಮದ ಗೋಡೆಯಲ್ಲಿ ಮೂರು ಗೂಡುಗಳಿವೆ ಮೊದಲು ವಿಗ್ರಗಳಿದ್ದವು ಈಗ ಖಾಲಿ ಇದೆ. ಗರ್ಭಗೃಹ ದ ಮದ್ಯ ಪಾನೀಪೀಠ ಇದೆ ಅವರ ಮೇಲಿದ್ದ ಲಿಂಗ ಇಂದು ಕಾಣೆಯಾಗಿದೆ. ಗರ್ಭಗೃಹ ಎಡಭಾಗಗಳು ಶಿಥಿಲಗೊಂಡಿದೆ. ಗಿಡಗಂಟಿಗಳಿಂತಲೂ ಮುಚ್ಚಿಹೋಗಿದೆ.

**ಸುಖನಾಸಿ :**

ಸುಖನಾಸಿಯು ಚೌಕಾರ ಹೊಂದಿದೆ ಬಾಗಿಲು ಅರ್ಧ ಚಂದ್ರಾಕೃತಿಯಲ್ಲಿದೆ ಎರಡೂ ಕಡೆಯೂ ದ್ವಾರಪಾಲರನ್ನು ಕೆತ್ತಿದ್ದಾರೆ. ಲಲಾಟ ಬಿಂಬದಲ್ಲಿ ಉಮಾ ಮಹೇಶ್ವರಯ ವಿಗ್ರಹವಿದೆ. ಸುಖನಾ,ಯ ಮೇಲ್ಛಾವಣಿಯನ್ನು 9 ಸಮಭಾಗವಾಗಿ ವಿಭಾಗಿಸಿ ಒಂದೊಂದು ಭುವನೇಶ್ವರಿಯೂ ಪುಷ್ಪಗುಚ್ಛವನ್ನು ಹೊಂದಿದೆ.

**ನವರಂಗ:**

ನವರಂಗವು 9 ಅಂಕಣದ ವಿಸ್ತಾರ ಹೊಂದಿದೆ ಮಧ್ಯದ ಅಂಕಣವನ್ನು ನಾಲ್ಕು ದೀಪಸ್ತಂಭ ಹೊಂದಿದೆ. ಮಧ್ಯದಲ್ಲಿ ನಂದಿಯ ವಿಗ್ರಹವಿದೆ. ನಂದಿಯ ಮೈಮೇಲೆ ಸೂಕ್ಷ್ಮ ಕೆತ್ತನೆಯನ್ನು ಮಾಡಲಾಗಿದೆ. ನವರಂಗದ ದ್ವಾರವು ಅರ್ಧ. ಚಂದ್ರಕೃತಿಯಲ್ಲಿದೆ ಆದರೆ ಅದು ಪೂರ್ಣ ಗೊಳಿಸಿಲ್ಲ ಲಟಾಟಬಿಂಬದಲ್ಲಿ ತಾಂಡವೇಶ್ವರ ಸಮೂರ್ಹವಿದೆ. ಚಿತ್ರಗಳು ಚಿಕ್ಕದಾದರೂ ಮನೋಹರವಾಗಿದೆ. ನವರಂಗ 9 ಭಾವಣಿಹೊಂದಿದ್ದು, ಮಧ್ಯದಲ್ಲಿ ವಿಸ್ತರವಾಗಿದ್ದು, ಸುಂದರವಾಗಿದೆ. ಮಧ್ಯದ ಭಾವಣಿ (ಭುವನೇಶ್ವರಿ)ಒಂದರೊಳಗೊಂದು ಸೇರಿದ ವೃತ್ತಗಳನ್ನು ಹೊಂದಿದೆ. ಇದ ಪದ್ಮ ಪದಕದಂತೆ ಕಾಣುತ್ತದೆ. ಉಳಿದ ಭುವನೇಶಶ್ವರಿ ಪದ್ಮ ಮಾದರಿ ಹಾಗೂ ಚೌಕ ಮಾದರಿಯನ್ನು ಹೊಂದಿದೆ. ನವರಂಗದ ಪಶ್ಚಿಮ ಗೋಡೆಯ ಮೇಲೆ 5 ವಿಗ್ರಹಗಳಿವೆ ಅವು ಗಣೇಶ, ಸಪ್ತ ಮಾತೃಕೆ, ಕುಮಾರ, ಸೂರ್ಯ ಮತ್ತು ವಿಷ್ಣು ಇವುಗಳನ್ನು ಇಂದು ನೂತನವಾಗಿ ನಿರ್ಮಿಸಲಾಗಿರುವ ಪಕ್ಕದ ಈಶ್ವರ ದೇವಾಲಯಕ್ಕೆ ಸ್ಥಳಾಂತರಿಸಲಾಗಿದೆ. ಗಣಪತಿ ವಿಗ್ರಹವು ದುಂಡಾದ ಶರೀರ, ಉದ್ದಸೊಂಡಿಲು ಸೂಕ್ಷ್ಮ ಕೆತ್ತನೆಯ ಕಿರೀಟ ಹೆಚ್ಚು ಕಲಾತ್ಮಕವಾಗಿಸಿದೆ. ಕುಮಾರ ವಿಗ್ರಹವನ್ನು ಹೆಚ್ಚು ಸೂಕ್ಷ್ಮ ಕೆತ್ತನೆಯಿಂದ ಕೆತ್ತಲಾಗಿದೆ. ನವಿಲನ್ನು ಸುಂದರವಾಗಿ ಕೆತ್ತಲಾಗಿದೆ. ವಿಗ್ರಹದ ಮುಖ ಭಾವನೆಯನ್ನು ಸುಂದರವಾಗಿ ಕೆತ್ತಲಾಗಿದೆ. ಸೂರ್ಯ ವಿಗ್ರಹವನ್ನು ಕುಶಲತೆಯಿಂದ ಕೆತ್ತಿದ್ದಾರೆ. ಏಳು ಕುದರೆ ಕಟ್ಟಿಕೊಂಡು ರಥ ಓಡಿಸುವ ಸಾರಥಿಯನ್ನು ಸ್ಪಷ್ಟವಾಗಿ ಕಾಣುವಂತೆ ಕೆತ್ತಿದ್ದಾರೆ. ಹಾವಿನ ತೊವಣವನ್ನೂ ಸೂಕ್ಷ್ಮವಾಗಿ ಕೆತ್ತಿದ್ದಾರೆ.

**ಮುಖಮಂಟಪ:** ಶಿಥಿಲಗೊಂಡಿದೆ ನಾಲ್ಕು ಕಂಬಗಳ ರಚನೆಯಿಂದ ದುಂಡಾಗಿ ಚಿತ್ರಿಸಿದ್ದಾರೆ. ಮುಖಮಂಟಪವು ಸುಂದರವಾದ ಭಾವಣಿಯನ್ನು ಹೊಂದಿದೆ. ಎರಡು ಸಾಲುಗಳ ನಕ್ಷತ್ರಕಾರದ ಸೂರುಗಳನ್ನು ಕೆತ್ತಿದ್ದಾರೆ. ಮಧ್ಯದಲ್ಲಿರುವ ಗುಮ್ಮಟ ಹೂವಿನ ದಳಗಳು ರಚನೆಯ್ನು ಹೊಂದಿದೆ. ಮಧ್ಯದಲ್ಲಿ ಪದಕದ ರಚನೆಯಂತಿದೆ. ಇಂದು ಈಗುಡಿಯು ಶಿಥಿಲವಾಗಿದೆ. ಇಲ್ಲಿಯ ವಿಗ್ರಗಳು ಈಶ್ವರ ಗುಡಿಯಲ್ಲಿ ಪೂಜಿಸಲ್ಪಡುತ್ತಿವೆ.

## ಅನಂತ ಪದ್ಮನಾಭ ದೇವಾಲಯ :

ಇದನ್ನು ಕೇಶವ ದೇವಾಲಯ ಎಂದೂ ಸಹ ಕರೆಯುವರು ಇದು ವಿಷ್ಣು ದೇವಾಲಯವಾಗಿದೆ. ಇದು ಕೂಡ ಕಾಶೀವಿಶ್ವೇಶ್ವರ ದೇವಾಲಯದಂತೆ ಶಿಥಿಲವಾಗಿದೆ. ಎರಡೂ ದೇವಾಲಯದ ರಚನೆಯು ಒಂದೇ ರೀತಿ ಇದೆ. ದೇವಾಲಯವು ಮೂರು ಅಡಿ ಉತ್ತರದ ಮೇಲೆ ಪೂರ್ವಾಭೀಮುಖವಾಗಿ ನಿಂತಿದ್ದು, ಗರ್ಭಗೃಹ, ಅಂತರಾಳ, ನವರಂಗ ಹಾಗ ಮುಖಮಂಟಪಗಳನ್ನು ಹೊಂದಿದೆ.

ಜಗತಿಯನ್ನು ಹೊಂದಿಲ್ಲ ಇದನ್ನೂ ಒಳಪದ ಕಲ್ಲನ್ನು ಉಪಯೋಗಿಸಿ ಕಟ್ಟಲಾಗಿದೆ. ಶಿಥಿಲ ಏಕಕೂಟ ದೇವಾಲಯ.

### ಗರ್ಭಗೃಹ:

ಗರ್ಭಗೃಹ ಚಚೌಕಾರ ಹೊಂದಿದೆ ದ್ವಾರ ಪಾಲಕ ಹಾಗೂ ದ್ವಾರವನ್ನು ಸೂಕ್ಷ್ಮ ಕೆತ್ತನೆಯಿಂದ ಕೆತ್ತಾಲಾಗಿದೆ. ಲಲಾಟಬಿಂಬದಲ್ಲಿ ಲಕ್ಷಿಯ ವಿಗ್ರಹವಿದೆ. ಗರ್ಭಗೃಹದ ಮೇಲ್ಬಾವಣಿಯನ್ನು 9 ಸಮಭಾಗವಾಗಿ ವಿಂಗಡಿಸಿದ್ದಾರೆ. ಒಂದೊಂದು ಕಮಲದ ರಚನೆಯನ್ನು ಹೊಂದಿದೆ. ಆನಂದ ಪದ್ಮನಾಭವನ ಮುಖ್ಯ ಲಕ್ಷಣ ಎಂದರೆ ಕಮಲದ ರಚನೆ ಗರುಡ ಪೀಠದ ಮೇಲೆ ಸ್ಥಾನಕ ಭಂಗಿಯಲ್ಲಿರವು ಕೇಶನವನ ಆಳೆತ್ತರದ ಶಿಲ್ಪದ ನಾಲ್ಕು ಕೈಗಳಲ್ಲಿ ಚಕ್ರ, ಅಷ್ಟಬಂಧ ಗದೆ ಹಾಗೂ ಶಂಖಗಳಿವೆ , ಪ್ರಭಾವಳಿಯಲ್ಲಿ ದಶಾವತಾರ ಕೆತ್ತನೆಯಿದ್ದು, ಎಡಬಲದಲ್ಲಿ ಶ್ರೀದೇವಿ ಭೂದೇವಿಯರಿದ್ದಾರೆ.

*ಸುಖನಾಸಿ:* ಚಚೌಕಾರವಾಗಿದೆ ಇದರ ದ್ವಾರಗಳೂ ಹೆಚ್ಚು ಕುಶಲತೆಯಿಂದ ಕೂಡಿದೆ ಮೂಲದಲ್ಲಿ ಎರಡು ದ್ವಾರಪಾಲರನ್ನು ನಿಲ್ಲಿಸಲಾಗಿತ್ತು. ಇಂದು ದೇವಸ್ಥಾನದ ಹೊರ ಭಾಗದಲ್ಲಿ ಬಿದ್ದಿವೆ. ಭುವನೇಶ್ವರಿ ಸುದಾರಣವಾಗಿದೆ 16 ಅಂಕಣ ಹೊಂದಿದೆ ಎಲ್ಲಾ ಕಡೆ ಪದ್ಮದ ಚಿತ್ರಗಳಿವೆ.

**ನವರಂಗ:** 9 ಅಂಕಣ ಆಗಲದ ಚಚೌಕಾರದ ಸಭಾಂಗಣ ಮದ್ಯದ ಅಂಕಣದಲ್ಲಿ ನಾಲ್ಕು ಚೌಕಸ್ತಂಭಗಳಿವೆ. ದ್ವಾರವು ಕುಶಲಕಲೆಯಿಂದ ಕೂಡಿದೆ. ಆದರೆ ಅವು ಪೂರ್ಣಗೊಂಡಿಲ್ಲ ದ್ವಾರದ

ಅಕ್ಕ-ಪಕ್ಕ ಯಾವುದೇ ವಿಗ್ರಹಗಳಲ್ಲಿ ಮದ್ಯದ ಭುವನೇಶ್ವರಿ ಛತ್ರಿಯಾಕಾರದಲ್ಲಿದೆ. ಎಲ್ಲಾ ಕೆ ಒಂದೇ ಸಮಭಾಗವಾದ ಅಂಕಣಗಳನ್ನು ಹೊಂದಿದೆ.

**ಮುಖಮಂಟಪ:** ಮುಖಮಂಟಪ ಶಿಥಿಲವಾಗಿದೆ ಅಧಿಷ್ಠಾನ ಐದು ಸಾಲುಗಳನ್ನು ಹೊಂದಿದೆ. ಮೂರನೇ ಮತ್ತು ನಾಲ್ಕನೇ ಸಾಲು ಹಲ್ಲಿನಾಕಾರದ ರಚನೆಯನ್ನು ಹೊಂದಿದೆ. ಎರಡನೇ ಹಾಗೂ ಕೊನೆಯ ಹಂತವು ಯಾವುದೇ ಕಲೆಯನ್ನು ಹೊಂದಿಲ್ಲ ಮೇಲಿನ ಸಾಲು ಆಯತಾಕಾರವಿದ್ದು, ಸರಳವಾಗಿದೆ. ಮಡಿಕೆಗಳನ್ನು ಸುಂದರವಾಗಿ ಕೊರೆದಿದ್ದಾರೆ. ಇದು ಕುಶರ ಕೆಲಸಗಾರರ ಕುಶಲತೆಯಾಗಿದೆ. ಅಲ್ಲೇ ದೇವಾಲಯದ ಅಕ್ಕ-ಪಕ್ಕ ಹಲವು ಕಂಬನಿಗಗಳು ಬಿದ್ದಿವೆ.

**ಶಿಖರ:** ಈ ದೇವಾಲಯದ ಸೌಂದರ್ಯ ಇರುವುದು ಇದರ ಶಿಖರದ ರಚನೆಯಿಂದ ಕೆಳಗಿನ ಅರ್ಧ ಚೌಕ ಸ್ತಂಭವನ್ನು ಹೊಂದಿದ್ದು, ಭಿತ್ತಿಯನ್ನು ಹೊಂದಿದೆ. ಸೂರು ಸೂಕ್ಷ್ಮ ಕೆತ್ತನೆಯನ್ನು ಹೊಂದಿದೆ. ಸೂರಿನ ಮೇಲ್ಬಾಗ ಚೌಕಸ್ತಂಭ ಮತ್ತು ಸಣ್ಣ ಸಣ್ಣ ಗೋಪುರಕಾರದ ರಚನೆ ಕಾಣುತ್ತೇವೆ. ಇಲ್ಲಿ ಸಣ್ಣ ಸಣ್ಣ ವಿಗ್ರಹ ರಚನೆಯನು ಮಾಡಲಾಗಿದೆ. ಇದೇ ರೀತಿಯ ಐದು ಸಾಲುಗಳಿವೆ. ಒಂದರ ಮೇಲೋಂದರಂತೆ ಮೇಲ್ಬಾಗಕ್ಕೆ ಹೋಗಿ ರಚನೆಯಾಗಿದೆ.

## ದುದ್ದ:

ತಾಲ್ಲೋಕು ಕೇಂದ್ರ ಮಂಡ್ಯದಿಂದ 15 ಕೆ.ಜಿ.ವಾಯುವ್ಯಕ್ಕೆ ಮೇಲು ಕೋಟೆ ರಸ್ತೆಯಲ್ಲಿರುವ ಹೋಬಳಿ ಕೇಂದ್ರ ಅಲ್ಲಿಂದ ಈ ವರೆಗೆ ಮೂರು ಶಾಸನಗಳು ವರದಿಯಾಗಿವೆ. (15 ರಿಂದ 1933-53)[23] ಶಾಸನವು ದುದ್ದ ಗ್ರಾಮದ ಆಂಜನೇಯ ದೇವಸ್ಥಾದ ಹತ್ತಿರದ ಮಂಟಪದ ಕಲ್ಲಿನಲ್ಲಿದೆ. ಈ ಶಾಸನವು 16ನೇ ಶತಮಾನದ ಕಾಲಾವಧಿಯದು. ಈ ಶಾಸನದಲ್ಲಿ ಬಂಡ್ಯಾದ ದೇವಿಶೆಟ್ಟಿಯ ವಕ್ಕಲು ತಂದೆ-ತಾಯಿಯ ವಂಶಕ್ಕೆ ಪುಣ್ಯ ಕೊಡು ಎಂದು ಕಟ್ಟಿಸಿದ ದೇವಸ್ಥಾನದ ವಿವರವನ್ನು ಈ ಶಾಸನ ಒಳಗೊಂಡಿದೆ. ಬಂಡ್ಯಾ ಎಂಬ ಪದ ಮಂಡ್ಯ ಇರಬೇಕು.

16(111 ಮಂ. 84 ರಿ 1933-54)[24] ಶಾಸನವು 18ನೇ ಶತಮಾನಕ್ಕೆ ಸಂಬಂಧಿಸಿದೆ ಜಕ್ಕಪ್ಪನ

ಮಂಟಪದ ಪಾಳು ನಿವೇಶನದಲ್ಲಿದೆ. ಮುಕಳಿ ಕೆರೆ ಸ್ಥಳದೊಳಗಣ ಭಯರ ಪುರವೆಂಬ ಗ್ರಾಮಕ್ಕೆ ಪ್ರತಿನಾಮದೇಯವಾದ ಬೋಮ ಅಬ ಸಮುದ್ರದ ನಿಯಕೆಲೆಲಿಯ ರಟ್ಟ ಕೋಟೆ ನರಸಿಂಹದೇವರಿಗೆ (ಲಕ್ಷ್ಮಿ)ಕೊಟ್ಟಂತಹ ದಾನವಾಗಿದೆ.

ಇಲ್ಲಿಯ ಲಕ್ಷ್ಮಿನರಸಿಂಹನ ಗುಡಿಗೆ ಗರ್ಭಗೃಹ, ಅಂತರಾಳ, ಹಾಗೂ ನವರಂಗಗಳಿದ್ದು, ಇತ್ತೀಚೆಗೆ ಪೌಳಿ ಗೋಡೆಯನ್ನು ನಿರ್ಮಿಸಲಾಗಿದೆ. ನಡುಕೇರಿ ನರಸಿಂಹ ಎಂದೇ ಕರೆಯಲ್ಪಡುವ ಇದು ಹೊಯ್ಸಳರ ಕಾಲದ ರಚನೆಯಾಗಿದ್ದು, ಗರ್ಭಗೃಹದಲ್ಲಿ ಲಲಿತಾಸೀನ ಚತುರ್ಭುಜದಾರಿ ನರಸಿಂಹನ ಎಡತೊಡೆಯ ಮೇಲೆ ಲಕ್ಷ್ಮಿಯು ಆಸೀನಳಾಗಿದ್ದು, ರಾಮಾನುಜರ ಶಿಲ್ಪವಿರುವ ಅಂತರಾಳದ ಬಾಗಿಲವಾಡವು ಪಂಚಶಾಖಾ ಲಂಕೃತವಾಗಿದ್ದು, ನವರಂಗದಲ್ಲಿ ಗರುಡ ವಾಹನವಿದೆ. ಈ ದೇವರ ಕಲ್ಯಾಣೋತ್ಸವವೂ ವರ್ಷಂಪ್ರತೀ ಜೂನ್ ತಿಂಗಳಲ್ಲಿ ಜರುಗತ್ತದೆ. 11 ಊರಾಚೆ ಬೆಟ್ಟಳ್ಳಿ ರಸ್ತೆಯಲ್ಲಿ ಕರೆದಂಡೆಯಲ್ಲಿರುವ ಹೊಯ್ಸಳರ ಕಾಲದ ಸೋಮೇಶ್ವರ ಗುಡಿಯು ಪಾಳು ಬಿದ್ದಿದೆ.

## ಗರ್ಭಗೃಹ:

ಅಂತರಾಳ ಹಾಗೂ ನವರಂಗಗಳಿರುವ ಇದರ ಛತ್ತುಗಳ ಕಮಲಾಲಂಕೃತವಾಗಿದ್ದು, ಬಾಗಿಲುವಾಡಿಗಳು ಪಂಚಶಾಲಾಂಕೃತವಾಗಿದ್ದು, ಗರ್ಭಗೃಹದಲ್ಲಿ ಶಿವಲಿಂಗ ಹಾಗೂ ನಂದಿಗಳಿದ್ದ ಕುರುಹುಗಳಿವೆ ದೇವಾಲಯ ಇಂದು ಹಾಳಾಗಿದೆ. ಭಿತ್ತಿಯಲ್ಲಿ ದೇವಕೋಷ್ಟ ಹಾಗೂ ಕಿರುಶಿಖರಗಳಿದ್ದು, ಪೂರ್ಣ ಹಾಳಾಗಿದೆ, (ನಡುತೆರೆ ನಾರಾಯಣ ಎಂದು ಕರೆಯುಲು ಕಾರಣವೇನೆಂದರೆ, ಆಂಜನೇಯ ದೇವಸ್ಥಾನದ ಹಿಂಭಾಗದಲ್ಲಿರುವ ಮುಕುಳಿ ಕೆರೆ ನೀರು ನರಸಿಂಹ ದೇವಾಲಯದ ಗೋಡೆಯ ಸುತ್ತಲು ಆವರಿಸಿ ನಡುವಿನ ತನಕ ನೀರು ನಿಲ್ಲುತ್ತಿತ್ತು) .

ಗಣಪತಿದೇವಾಲಯ ಗುಡಿಗೆ ಅನತಿ ದೂರದಲ್ಲಿ ಪಾಳು ಮಂಟಪವಿದೆ. ಅಲ್ಲೇ ಇರುವ ಗಣಪತಿ ಗುಡಿಯಲ್ಲಿ ಹೊಯ್ಸಳರ ಕಾಲದ ಗಣಪತಿ ಹಾಗೂ ಸಪ್ತಮಾತೃಕಾ ಪಟ್ಟಿಕೆಗಳಿವೆ. ಕೆರೆಯೆ ಬಳಿ ಸ್ಥಳವೊಂದನ್ನು ತೋರಿಸಿ ಹಿಂದೆ ದುದ್ದ ಹಾಗೂ ಬಸರಾಲಿನ ಪಾಳೇಗಾರರ ನಡುವೆ ನಡೆದ ಶೀತಲ ಯುದ್ದ, ಬಸರಾಳಿನ ಪಾಳೇಗಾರರುನ್ನು ಕರೆಸಿ, ಬಂಧಿಸಿ, ಶಿರಚ್ಛೇದನ ಮಾಡಿಸಿ ಅವನ ರಾಣಿಯನ್ನು

ವಂಚಿಸಿ ಪಡೆಯಲು ದುದ್ದದ ಹೆಬ್ಬಾಗಿಲ ಬಳಿ ಶಪಿಸಿ ಆತ್ಮಾಹುತಿ ಮಾಡಿಕೊಂಡ ಬಸರಾಳಿನ ಪಾಳೇಗಾರ್ತಿ ಹಾಗೂ ಕರುಗಲ್ಲಿಗಾಗಿ ದುದ್ದ- ಬಸರಾಳು ಪಾಳೇಪಟ್ಟುಗಳು ಹಾಳಾದುದರ ಬಗ್ಗೆ ಹೇಳುವ ಜನಪದ ಕಥೆಗಳು ಗಮನಾರ್ಹವಾಗಿದ್ದು ಅವುಗಳ ಐತಿಹಾಸಿಕ ಕಥೆಯನ್ನು ಖಚಿತಪಡಿಸಿಕೊಳ್ಳಬೇಕಾಗಿದೆ.

ಊರಾಚೆ ಇರುವ ಹೊಯ್ಸಳರ ಕಾಲದ ಚೌಡೇಶ್ವರಿ ಗುಡಿಯ ಗರ್ಭಗೃಹವಷ್ಟೇ ಉಳಿದಿದ್ದು, ಒಳಗೆ ನಾಲ್ಕು ಅಡಿ ಎತ್ತರದ ಆಸೀನ ದುರ್ಗಿಯ ಶಿಲ್ಪವಿದೆ. ದೇಶಿಕ್ ಸೌಟು ಹಿಂದೆ ಇದು 24 ಹಳ್ಳಿಗಳ ಮೇಲೆ ಹಿಡಿತ ಹೊಂದಿದ್ದ ಕಟ್ಟೆಮನೆಯಾಗಿತ್ತು. ಇಲ್ಲಿಯ ವೆಂಕಟನರಸಯ್ಯ ಶೆಟ್ಟರ ಮನೆಯಲ್ಲಿರುವ 24 ಅಂಗುಲ ಉದ್ದದ ದೇಶಿಕರ ಕಂಚಿನ ಸೌಟು ಕಲಾತ್ಮಕವಾಗಿದೆ. ಹಿಂದೆ ಈ ಸೌಟಿಗೂ ಕಟ್ಟೆಮನೆಯ ಎಲ್ಲಾ 24 ಹಳ್ಳಿಗಳಿಗೂ ಸಂಬಂಧವಿದ್ದು, ಹಬ್ಬ -ಹರಿದಿನ, ಮದುವೆ, ಮುಂಜಿ, ಜಾತ್ರೆ, ಉತ್ಸವ ಸಂದರ್ಭಗಳಲ್ಲಿ 3 ಪಾವು ಹಿಡಿಯುವ ಈ ಸೌಟಿನಿಂದ ಪಡಿ ಸಂಗ್ರಹಿಸಲಾಗಿತ್ತು. ಬಾಯನ್ನು ಎರಡೂ ಕಡೆಯಿಂದಲೂ ಸುಂದರವಾದ ಹಂಸಗಳು ಹಿಡಿದಂತಿದೆ, ಕಲಾತ್ಮಕ ಸೌಟಿನ ಹಿಡಿ ಹಾಗೂ ಬಾಯಿಗಳ ನಡುವೆ ನಾಗರಹೆಡೆಯನ್ನು ಧರಿಸುವ ಸೋಮೇಶ್ವರ ಲಿಂಗ, ನಂದಿಲಿಂಗಗಳಿವೆ, ಬದಿಯಲ್ಲೇ ಕುದುರೆ, ತಕ್ಕಡಿ, ನೇಗಿಲು, ಜನಿವಾರ, ಅಡಿಗಲ್ಲು, ಪೀಡ, ಕತ್ತರಿ, ಮೋಚಿ, ಹಜಾಮ, ಮಡಿವಾಳ, ಮತ್ತು ಹೊಲೆಯ ಹೀಗೆ ಗ್ರಾಮಗಳಲ್ಲಿ ಹಿಂದೆ ವಾಸಿಸುತ್ತಿದ್ದ 18 ಜಾತಿಯವರ ವೃತ್ತಿ ಚಿಹ್ನೆಗಳನ್ನು ಸಾಂಕೇತಿಕವಾಗಿ ಎರಕ ಹೊಯ್ಯಲಾಗಿದೆ. ಸೌಟಿನ ಹಿಡಿಯ ಆಯಾಕಟ್ಟಿನಲ್ಲಿರುವ ವೊಳ್ಳೆಯಲ್ಲಿ ದೀಪ ಬೆಳಗಿಸಬಹುದಾಗಿದ್ದು, ಸಣ್ಣ ಸರಪಳಿಯಿಂದ ಇಳಿವನ್ನು ಬಿಂಬಿಸುವಂತಿದೆ ವಸ್ತು ಸಂಗ್ರಹಾಲಯ ದಲ್ಲಿರಬೇಕಾದ ಇದು ಶೆಟ್ಟರ ಮನೆಯಲ್ಲಿದೆ. ಇಲ್ಲಿ ಕೋಟೆ ಇತ್ತಾದರೂ ಇಂದು ಏನೇನು ಉಳಿದಿಲ್ಲ ಉಳಿದಂತೆ ಊರಲ್ಲಿ ರಾಮ, ವೀರಭದ್ರ, ಆಂಜನೇಯ, ಲಕ್ಷ್ಮಿದೇವಿ, ಮಾರಮ್ಮ, ಹೊಂಬಾಳಮ್ಮ, ಪಟ್ಟಲದಮ್ಮ ಗುಡಿಗಳಿವೆ.

ಒಟ್ಟಾರೆ ಆಂಜನೇಯ ದೇವಸ್ಥಾನದ ಹತ್ತಿರವಿರುವ ಮಂಟಪದ ಕಲ್ಲು ಇಂದು ಸ್ಥಳಾಂತರ ಗೊಂಡಿದೆ. ಕ್ಷೇತ್ರ ಕಾರ್ಯ ನಡೆಸದಂತಹ ಸಂದರ್ಭದಲ್ಲಿ ಕೇವಲ ಒಂದು ಶಾಸನ ಗಣಪತಿ ದೇವಸ್ಥಾನದ ಮುಂಭಾಗ ಅರಳಿಕಟ್ಟೆಗೆ ಕಟ್ಟಿದ ಕಲ್ಲುಗಳು ಜೊತೆ ಶಾಸನವನ್ನು ಜೋಡಿಸಿದ್ದಾರೆ ಆದರ ಮೇಲಿನ ಅಕ್ಷರ ಅಷ್ಟು ಸ್ಪಷ್ಟವಾಗಿಲ್ಲ.

ಬಹುಶಃ ಮಂಡ್ಯದ ದೇವಿಶೆಟ್ಟಿಯೆಂಬ ವ್ಯಾಪಾರಿಯು ಆಂಜನೇಯ ಗುಡಿಯ ನಿರ್ಮಾಪಕ ನಿರಬೇಕು ಇಂದಿಗೂ ಆ ಊರಿನಲ್ಲಿ ಶೆಟ್ಟರ ಒಂದು ಕುಟುಂಬ ವಾಸವಾಗಿದೆ. ಅದಕ್ಕೆ ಸಾಕ್ಷಿಯೆಂಬಂತ್ತೆ ಮೇಲೆ ವಿವರಿಸಿದ ದೇಶಿಕ್ ಸೌಟು ವೆಂಕಟನರಸಯ್ಯ ಶೆಟ್ಟರ ವಂಶದ ಮನೆಯಲ್ಲಿಯೇ ಇದೆ. ಬಸರಾಳಿನ ಪಾಳೇಗಾರ್ತಿ ಆತ್ಮಾರ್ಪಣೆ ಮಾಡಿಕೊಡಲೆಂದು ಹೇಳುವ ಸ್ಥಳದಿಂದ ಸ್ವಲ್ಪ ದೂರ ಅವರ ಮನೆಯಿದೆ. ಕ್ಷೇತ್ರ ಕಾರ್ಯಸಂದರ್ಭಗಳಲ್ಲಿ ಹೋಗಿದ್ದಾಗ ಅದನ್ನು ತಂದು ಪ್ರದರ್ಶಿಸಿದರು ಈಗಲೂ ಕೂಡ ಹಾಳಾಗದೇ ಉಳಿದಿದೆ. ಹಿಡಿಕೆಯಲ್ಲಿದ್ದ ಗಂಟೆಯನ್ನು ಎತ್ತಿ ಹಿಡಿಯಲು ಸುಲಭವಾಗಿರಲೆಂದು ತೆಗೆದಿಡಲಾಗಿದೆ. ಅದರ ಹೊಳಪು ಇನ್ನೂ ಮಾಸಿಲ್ಲ. ಅವರ ನಂಬಿಕೆ ಏನಿದೆಯೋ ದೇವರ ಮನೆಯ ಲ್ಲಿಟ್ಟು ಅದನ್ನು ದಿನಾಲೂ ಪೂಜಿಸುತ್ತಾರೆ. ನಮ್ಮನ್ನು ಮುಟ್ಟ ನೋಡಲು ಸಹ ಬಿಡುತ್ತಿರಲಿಲ್ಲ.

ಲಕ್ಷ್ಮಿ ನರಸಿಂಹ ವಿಗ್ರಹವು ಸಾಲಿಗ್ರಾಮ ಶಿಲೆಯಿಂದ ಕೆತ್ತಲ್ಪಟಿದೆ. ವಿಗ್ರಹದ ಸುತ್ತ ದಶಾವತಾರ ಕೆತ್ತನೆ ಇದೆ. ಮೂರ್ತಿ ಪೂರ್ವಾಭಿಮುಕವಾಗಿ ಪ್ರತಿಷ್ಠಾಪಿಸಲಾಗಿದೆ. ಪಾನಿಪೀಠ ಈಶಾನ್ಯ ದಿಕ್ಕಿಗಿದೆ. ಈಶಾನ್ಯ ದಿಕ್ಕಿಗೆ ಈಶ್ವರನ ದೇವಾಲಯವಿದೆ. ಅಂತರಾಳದಲ್ಲಿ ರಾಮಾನುಜರ ವಿಗ್ರಹವಿದೆ. ಶಾಸನಗಳಲ್ಲಿ ಕೇವಲ ಶತಮಾನಗಳನ್ನು ತಿಳಿಸುತ್ತವೆಯೇ ವಿನಹಃ ಯಾವ ರಾಜವಂಶದ ಕಾಲಾವಧಿದೆಂದು ತಿಳಿಸುವುದಿಲ್ಲ. ಮೇಲಿನ ಲಕ್ಷಣಗಳಿಂದ ಇದು ಹೊಯ್ಸಳರ ಕಾಲಾವಧಿಯದೆಂದು ಹೇಳಬಹುದು.

ಸೋಮೇಶ್ವರ ದೇವಾಲಯ ಸಂಪೂರ್ಣ ಶಿಥಿಲವಾಗಿದ್ದು ಬಳ್ಳಿ, ಗಿಡ, ಗಂಟೆಗಳು, ಬೆಳೆದಿವೆ. ಬಾವಲಿ; ಹಾವುಗಳು ಅವಸ್ಥಾನದಲ್ಲಿವೆ. ನವರಂಗದಲ್ಲಿ ಒಂದು ಮೂರ್ತಿ ಶಿಲ್ಪವಿದ್ದು ಅದರ ತಲೆಯನ್ನು ಕಡಿದು ಶರೀರ ಭಾಗವನ್ನು ಬಿಟ್ಟಿ ಹೋಗಿದ್ದಾರೆ. ಸ್ಥಳೀಯರ ಪ್ರಕಾರ ಅದು ವಿರೂಪಾಕ್ಷ ವಿಗ್ರಹವಾಗಿದೆ. ಆದರೆ ಅದರ ದೇಹ ರಚನೆಯನ್ನು ನೋಡಿದರೆ ಯಕ್ಷನ ಶಿಲ್ಪದಂತೆ ಕಾಣುತ್ತದೆ.

ಶಿವಲಿಂಗ ಮತ್ತು ನವರಂಗದಲ್ಲಿರುವ ಈ ವಿಗ್ರಹ ಎರಡನ್ನು ಉದ್ದೇಶಪೂರ್ವಕವಾಗಿ ಭಗ್ನಗೊಳಿಸಿದಂತೆ ಕಾಣುತ್ತದೆ. ಶಿಥಿಲತೆ ಆ ವಿಗ್ರಹಗಳಲ್ಲಿ ಕಂಡು ಬಂದಿಲ್ಲ.

ಚೌಡೇಶ್ವರಿ ಗುಡಿಯು ಸಂಪೂರ್ಣವಾಗಿ ಆಧುನಿಕರಣಗೊಳಿಸಲಾಗಿದೆ. ಗುಡಿಯು ತುಂಬಾ ಸರಳವಾಗಿದೆ. ಗರ್ಭಗೃಹ ಮಾತ್ರ ಇದ್ದು ಇತ್ತೀಚಿನ ನವರಂಗದ ರೀತಿ ನಿರ್ಮಾಣಮಾಡಿದ್ದಾರೆ. ಗರ್ಭಗುಡಿಯಲ್ಲಿದ್ದ ಛಾವಣಿಯನ್ನೆಲ್ಲಾ ತೆಗೆದು ಆಧುನಿಕ ರೀತಿಯಲ್ಲಿ ನವೀಕರಿಸಿದೆ ಅಲ್ಲಿನ ಚೌಡೇಶ್ವರಿ ವಿಗ್ರಹವನ್ನು ಸಹ ಭಗ್ನವಾಗಿದೆ ಎಂಬ ಕಾರಣಕ್ಕಾಗಿ ತೊಣ್ಣೂರು ಕೆರೆಗೆ ಬಿಟ್ಟು ಹೊಸ ವಿಗ್ರಹವನ್ನು ಕೆತ್ತಿಸಿದ್ದಾರೆ.

ಸದ್ಯ ಈ ದೇವಾಲಯಗಳೆಲ್ಲಾ ಮುಜರಾಯಿ ಇಲಾಖೆಗೆ ಸೇರಿದೆ.

## ಬಸರಾಳು

ಪ್ರಾಚೀನ ಕಾಲದ ಹೊಯ್ಸಳರ ಶಾಸನಗಳು ಸಿಕ್ಕಿದೆ ಈ ಶಾಸನಗಳಲ್ಲಿ ''ಬಸಿರುವಾಳು'' ಎಂಬ ಉಲ್ಲೇಖವಿದೆ. ಈವರೆಗೆ ವರದಿಯಾಗಿರುವ ಬೇರೆ ಬೇರೆ ಕಾಲದ ನಾಲ್ಕು ಶಾಸನಗಳನ್ನು ಮಲ್ಲೇಶ್ವರ ಗುಡಿ ಬಾಗಿಲ ಬಳಿ ಇರುವ ಒಂದೇ ಕಲ್ಲಿನ ಮೇಲೆ ಕೆತ್ತಲಾಗಿದೆ. ಪ್ರಾರಂಭದ ಶಾಸನ 2ನೇ ನರಸಿಂಹನ ಕಾಲಕ್ಕೆ ಸೇರಿದ್ದು, 3ನೇ ಏಪ್ರಿಲ್ ಕ್ರಿ.ಶ. 1234 ವರ್ಷದ್ದಾಗಿದೆ. ದೊರೆತಿರುವ 4 ಶಾಸನಗಳಲ್ಲಿ ಈ ಶಾಸನ ತುಂಬಾ ದೊಡ್ಡ ದಾದ ಶಾಸನ ಮತ್ತು ಅಷ್ಟೇ ಪ್ರಮುಖವಾದ ಶಾಸನವಾಗಿದೆ. ಏಕೆಂದರೆ ಇದು 2ನೇ ನರಸಿಂಹನ ಕಾಲವಧಿಯವರೆಗಿನ ವಂಶಾವಳಿಯ ಬಗ್ಗೆ ವಿವರಣೆಯನ್ನು ನೀಡುತ್ತದೆ. ( ಶಾಸನ ಸಂಖ್ಯೆ 29) 1234 [25] ರ ಶಾಸನವು ಹರಿಹರ ದಂಡನಾಯಕನು ತನ್ನ ಹುಟ್ಟೂರಾದ ಬಸರಾಳಿನಲ್ಲಿ ಮೇರು ಪರ್ವತಕ್ಕೆ ಸಮ ವಾದ ಮಲ್ಲಿಕಾರ್ಜುನ ದೇವಾಲಯವನ್ನು ತಂದೆ ಮಲ್ಲೆನಾಯಕನ ಹೆಸರಲ್ಲೂ ಕೆರೆಯನ್ನು ತಾಯಿ ಗುಜ್ಜವೆಯ ಹೆಸರಲ್ಲೂ ನಿರ್ಮಿಸಿ ದೇವರ ಸೇವೆಗೆಂದು ಬಿಟ್ಟ ದತ್ತಿ ಶಾಸನದಲ್ಲಿ ಉಲ್ಲೇಖವಿದೆ.. ಇವರ ಮೊಮ್ಮಕ್ಕಳ ಹೆಸರನ್ನೂ ಕೂಡ ಶಾಸನದಲ್ಲಿ ದಾಖಲಿಸಿದೆ. ಚಿಕ್ಕ ಹದೇವಲ ಮತ್ತು ನಾಗಲೇ . ಈ ಮೂವರು ಸೇರಿ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿಸಿದರು . ಕೆರೆಯನ್ನು ತೋಡಿದರು. ಯಾವ ಕಾರಣಕ್ಕಾಗಿ ದಾನ ನೀಡಿದರು ಎಂಬ ವಿಷಯ ತಿಳಿಯಲಾಗುತ್ತಿಲ್ಲ. ಶಾಸನ ಶಿಥಿಲವಾಗಿದೆ. ಶಾಸನವು ದೇವಾಸ್ಥಾನದ ವೈಭವ ವಾಗಿದ್ದನ್ನು ತಿಳಿಸುತ್ತವೆ . ದೇವಾಲಯವು ಹಲವಾರು ಭರತನ ಕಥೆಯನ್ನು ಹೇಳುವ ಹೊಳಪುಳ್ಳ ಕುಶಲ ಕಲೆಯನ್ನು ಹೊಂದಿತ್ತು ಎಂಬುದನ್ನು ತಿಳಿಸುತ್ತವೆ. ದೇವರ ಶ್ರೀಕಾರ್ಯಕ್ಕೆ ಅದಕ್ಕೆ ತಗಲುವ

ಖರ್ಚುವೆಚ್ಚಗಳನ್ನು ಸರಿದೂಗಿಸಲು ಚತುರ್ಸೀಮೆ ಯನ್ನು ದತ್ತಿ ಬಿಟ್ಟಿದರು.

**ದಾನಿಯು ದೇವಾಲಯಕ್ಕೆ ಬಿಟ್ಟಂತಹ ದಾನ ದ ವಿವರಗಳು:-**

★ಚತುರ್ಸೀಮೆಯ ಸಹಿತ ಬೆಳವನಹಳ್ಳಿ,

★ ಬಸುರಿವಾಳ ಹರಿಕೆರೆಯ ಕೆಳಗೆ ಗದ್ದೆ ಸ.6 ಕೆ.10 ಹಡವನ ಹಳ್ಳಿಯ ಕೆಳಯ ಕೆಳಗಿನ ಗದ್ದೆ (ಬ ಸುರಿವಾಳದ ಕೆರೆ ಕೆಳಗಿನ ನೀರಾವರಿ ಪ್ರದೇಶ),

★ ಹದವನ ಹಳ್ಳಿಯ ಕೆರೆಯ ಕೆಳಗಿನ ಸ 6 10 ಕೇ ವಿಸ್ತೀರ್ಣ ನೀರಾವರಿ ಪ್ರದೇಶ,

★ ಗುಜ್ಜವ್ವೆ ನಾಯಕಗಿತ್ತಿ ಕೆರೆಯ ಕೆಳಗಿನ ಸ 46 ನೀರಾವರಿ ಪ್ರದೇಶ,

★ ಎಕ್ಕೆ ಹಟ್ಟಿಯ ಕೆರೆಯ ಕೆಳಗೆ ಸ 3 ಗದ್ದೆ ಸ 20 ಬೆದ್ದಲು,

★ ಹಿರಿಯೂರು ಮತ್ತು ಹದವನ ಹಳ್ಳಿಯ 750 ಕಂಬಸ ಒಳ ಪ್ರದೇಶ,

★ 500 ಕಂಬಸ್ ಒಳಭೂಮಿ ಹುಲಿ ಯ ಹಾಲು ಹೂವಿಸಿ ತೋಟ ದೊಡ್ಡ ವಳ್ಳಿ ಕಣಿವೆ,

★ ಈ ದೇವರಿಗೆ ನಿತ್ಯ ನೈವೇದ್ಯ ನಡೆಯಲು ನಿ ತ್ಯ ಪಡಿ:- ತುಪ್ಪದ ಖರ್ಚಿಗೆ ಮಾನ 1 ರ ಲೆಕ್ಕದಲ್ಲಿ ವರ್ಷವೊಂದಕ್ಕೆ ಗ 2 ಪ 4 ಉಪ್ಪು ಮಾನ 1 ರ ಲೆಕ್ಕದಿ ವ ರ್ಷವೊಂದಕ್ಕೆ ಹಣ 4 ಮಳಸರವನದ ಲೆಕ್ಕ,

★ ವೀಳೆಯ ದಡಕ್ಕೆ 20 ಎಲೆ 600 ವರ್ಷವೊಂದಕ್ಕೆ ಗ 2 ದೂಪಕ್ಕೆ ವ ರ್ಷವೊಂದಕ್ಕೆ ಗ 1,

★ ದೇವರಿಗೆ ಲೇಪಿಸುವ ಗಂಗದ ಲೇಪನಕ್ಕೆ ವ ರ್ಷವೊಂದಕ್ಕೆ ಗ 4 ದೇವರ ವಸ್ತ್ರಕ್ಕೆ 12 ಡಕ್ಕಂ,

★ 3 ಬ್ಳ್ಳಾ ಎಣ್ಣೆ ಯನ್ನು ದೀಪ ಉರಿಸಲಿಕ್ಕೆ,

★ ತುಪ್ಪದ ಖರ್ಚಿಗಾಗಿ ಬಳ್ಳೇನಳ್ಳಿಯ ಸಿದ್ದಾಯವನ್ನು ಬಿಟ್ಟಿದ್ದರು,

ಈ ಪ್ರಮಾಣವು ಹಬ್ಬಗಳಾದ ಚೈತ್ರ, ಪವಿತ್ರ, ಗ್ರಹಣ, ಶಿವರಾತ್ರಿ ಮತ್ತು ಸಂಗ್ರಮಣದ ಕಾಲದಲ್ಲಿ ನಿತ್ಯಕೊಡುವುದಕ್ಕಿಂತ ಎರಡು ಪಟ್ಟು ಹೆಚ್ಚಾಗುತ್ತಿತ್ತು,

★ ತೆರೆ ಸೀರೆ 3ಕ್ಕಂ ಅಂತು ಸೀರೆ 15 ಕ್ಕಂ ಹಬ್ಬಗಳಲ್ಲಿ ಹೋಮ ದ್ರವ್ಯಗಳಿಗೆ ಗ 1 ಚೈತ್ರ ಪವಿತ್ರದ ನೂಲು ದವನ ವಸ್ತ್ರಗಳಿಗೆ ಗ 1,

★ ಅಷ್ಟಮಿ ನವಮಿ ದಿನಗಳಲ್ಲಿ ಮಾಡುವ ಪಂಚಾಮೃತ, ಸಕ್ಕರೆ ಜೇನುತುಪ್ಪಕ್ಕೆ ಒಂದು ಗದ್ಯತಾ

★ ಚತುರ್ದಸಿ ಸಮಯದಲ್ಲಿ ಮಾಡುವ ಮಹಾಮಜ್ಜನ ಮತ್ತು ಸಹಪ್ರಾಭಿಷೇಕಕ್ಕೆ ಹಾಗೂ ಎಣ್ಣೆ, ಸೀಗೇಕಾಯಿ ಅರಿಸಿಣದ ಖರ್ಚಿಗಾಗಿ 5 ಪಣಗಳ ಬಳಕೆ, ಪ್ರತಿವರ್ಷ ಹೀಗೆ ಮಂಗಳ ಮಹಾ ಶ್ರೀ ಶ್ರೀ ಶ್ರೀ ಕಾರ್ಯ ನಡೆಯತಕ್ಕದ್ದು ಎಂದು ಸುಮಾರು 50 ಸಾಲುಗಳಲ್ಲಿ ಶಾಸನದಲ್ಲಿ ಕೆತ್ತಲಾಗಿದೆ.

ಎರಡನೆಯ ಶಾಸನದಲ್ಲಿ ಸೋಮೇಶ್ವರದ ಶಾಸನವಿದೆ. ಮೊದಲ ಶಾಸನ ಪ್ರಕಟಣೆಗೊಂಡ 3 ವರ್ಷದ ನಂತರ ಕೆತ್ತಿಸಲಾಯಿತು. ಹೇಮಲಾಂಭಿ ಕಾರ್ತಿಕ ಸ.2 ಗುರುವಾರ, ಅಕ್ಟೋಬರ್ 22 ಕ್ರಿ.ಶ.1237ರಂದು ಈ ಶಾಸನದ ಕವಿ ಚಿದಾನಂದ ಕವಿ ಸೂಕ್ತಿ ಸುಧಾರ್ಣವ ಗ್ರಂಥವನ್ನು ರಚಿಸಿದ ಚಿದಾನಂದ ಮಲ್ಲಿಕಾರ್ಜುನನೇ ಇವನಾಗಿದ್ದು ವ್ಯಾಕರಣ ಗ್ರಂಥವಾದ ಶಬ್ದ ಮಣಿ ದರ್ಪಣ ಬರೆದ ಕೇಶರಾಜನ ತಂದೆಯೇ ಇವನೆಂಬ ಅಭಿಪ್ರಾಯವಿದೆ. ಈ ಶಾಸನವು ಸೋಮೇಶ್ವರ ದೇವರಿಗೆ ಹರಿಹರ ದಂಡ ನಾಯಕನು ಬಸುರಿವಾಳಿಗೆ ಸೇರಿದ ಬೇಬಿ ಹಾಗೂ ತರಣಿ ಇಂದಿನ ತರಣಗೆರೆ ಗ್ರಾಮಗಳ ಸಿದ್ದಾಯ (ರಾಜ್ಯಾದಾಯ) ವನ್ನು ದತ್ತಿ ಬಿಟ್ಟ ವಿಷಯವನ್ನು ದಾಖಲಿಸಿದೆ. ದೇವಾಲಯದ ಪೂಜಾರಿಯ ಖರ್ಚಿಗಾಗಿ 8 ಗದ್ಯಣವನ್ನು ವರ್ಷದ ಖರ್ಚಿಗಾಗಿ ಕೊಡಲಾಗುತ್ತಿತ್ತು.

★ 3 ಗದ್ಯಣ ದಿನಚರಿಗಾಗಿ,

★ 3 ಗದ್ಯಣ ಅಡಿಗೆಗಾಗಿ,

★ 3 ಗದ್ಯಣ ತೋಟಕ್ಕಾಗಿ,

★ 3 ಗದ್ಯಣ ಹೂ ಮಾರುವವನಿಗೆ,

★ 3 ಗದ್ಯಣ ಅಂಗರಕ್ಷಕರಿಗಾಗಿ,

★ 6 ಗದ್ಯಣ ವಾದ್ಯದವರಿಗೆ,

★ 1 ಗದ್ಯಣ ಕುಂಬಾರನಿಗೆ,

★ 3 ಗದ್ಯಣ ಆರತಿ ಮಾಡುವವನಿಗೆ,

ಇದಲ್ಲದೆ ಬೇಬಿ ಪ್ರದೇಶದಲ್ಲಿ ಬೆಳೆಯುತ್ತಿದ್ದ ಖರ್ಚಿಗಾಗಿ ಬ್ರಾಹ್ಮಣರಿಗೆ 2 ಕೋಳಗ ಮತ್ತು 2 ಬಳ್ಳಾ ಅಕ್ಕಿ,

★ ದಿನ ಒಂದು ಮಣ ಉಪ್ಪಿನಂತೆ 4 ಪಣವನ್ನು ಉಪ್ಪಿನ ಖರ್ಚಿಗೆ,

★ 6 ಪಣ ಮೆಣಸಿಗೆ ( ದಿನವೊಂದಕ್ಕೆ 1 ಸೋಲಿಗೆ ಲೆಕ್ಕ),

★ 2 1/2 ಮಣ ದಿನ ಖರ್ಚಿನಂತೆ ಲೆಕ್ಕಹಾಕಿ 2 ಗದ್ಯಣ ಎಣ್ಣೆ ಖರ್ಚಿಗಾಗಿ,

★ ಒಂದು ಗದ್ಯಣ ಮತ್ತು 5 ಪಣ ಎಣ್ಣೆಗಾಗಿ,

★ 3 ಗದ್ಯಣ ಅಡಿಗೆ ಮಾಡುವವರಿಗೆ,

★ 3 ಗದ್ಯಣ ದೇವಾಲಯದ ಮತ್ತು ಛತ್ರದ ಮೇಲುಸ್ತುವಾರಿ ನಡೆಸುವ ಮೇಲ್ವಿಚಾರಕನಿಗೆ,

★ 30 ಗದ್ಯಣ ನಾದಸ್ವರ ನುಡಿಸುವವನಿಗಾಗಿ ಹೀಗೆ ದೇವಸ್ಥಾನದ ಎಲ್ಲಾ ಖರ್ಚು ವೆಚ್ಚಗಳಿಗಾಗಿ ಇಷ್ಟಿಷ್ಟು ಮಾಡಬೇಕೆಂದು ಅದನ್ನು ಶಾಸನಗಳಲ್ಲೇ ಕೆತ್ತಲಾಗಿದೆ,

3ನೇ ಶಾಸನವು ಕೂಡ ಸೋಮೇಶ್ವರನ ಕಾಲಕ್ಕೆ ಸೇರಿದ್ದು, ಶಕ 1189, ಪ್ರಭಾವ, ವೈಶಾಖ ಬಿವಿ 1ನೇ ಗುರುವಾರ, ಬಾಧ್ಮಿದಾತ 11ನೇ ಏಪ್ರಿಲ್ 1267 ಈ ಶಾಸನವು ಕೂಡ ಸೋಮೇಶ್ವರ ದೇವಾಲಯಕ್ಕೆ ಅದರ ಶ್ರೀಕಾರ್ಯಕ್ಕಾಗಿ 65 ಗದ್ಯಣವನ್ನು ಹರಿಯಣ್ಣನಿಂದ ಬರುವ ಬಗ್ಗೆ ತಿಳಿಸುತ್ತದೆ.

ಮೇಲಿನ ಅಂಶಗಳು ಶಾಸನಗಳಲ್ಲಿ ಉಲ್ಲೇಕವಾಗಿರುವ ಸೋಮೇಶ್ವರ ದೇವರ ಕಾರ್ಯಕ್ಕಾಗಿ ಖರ್ಚು ವೆಚ್ಚಗಳ ವಿವರ ಮೊದಲ ಶಾಸನ 1234 ಶಾಸನ ಉಲ್ಲೇಖದಂತೆ ಸೋಮೇಶ್ವರ ದೇವಾಲಯ ಕ್ರಿ.ಶ. 1234ರಲ್ಲಿ ಕಟ್ಟಲ್ಪಟ್ಟಿತು. ಈ ದೇವಾಲಯ ತಾಲ್ಲೋಕು ಕೇಂದ್ರ ಮಂಡ್ಯದಿಂದ 24 ಕಿ.ಮೀ ದೂರಕ್ಕೆ ಉತ್ತರದಲ್ಲಿದೆ. ಈ ದೇವಾಲಯವನ್ನು ಸಾಮಾನ್ಯವಾಗಿ 'ಈಶ್ವರ ದೇವಸ್ಥಾನ 'ಎಂದು

ಕರೆಯುವರು. ಆದರೆ ಶಾಸನಗಳಲ್ಲಿ ಅದನ್ನು ಮಲ್ಲಿಕಾರ್ಜುನ ದೇವಸ್ಥಾನ ಎಂದು ಉಲ್ಲೇಖಿಸಿದೆ. ಈ ದೇವಾಲಯ ಹೊಯ್ಸಳ ಶೈಲಿಯನ್ನು ಬಿಂಬಿಸುವ ಉತ್ತಮ ಕೆತ್ತನೆಯಾಗಿದೆ. 16ನೇ ಶತಮಾನದಲ್ಲಿ ದೇವಾಲಯ ನಿರ್ಮಾಣಗೊಂಡಿದೆ. ದೇವಾಲಯ ತ್ರಿಕೂಟಚಲವಾಗಿದೆ ಮತ್ತು ಮೂರು ಗರ್ಭ ಗೃಹಗಳನ್ನು ಹೊಂದಿದೆ.

ಸಾಮಾನ್ಯವಾದ ನವರಂಗ , ಮುಕಮಂಟಪ, ನಂದಿಮಂಟಪ ಮತ್ತು ದ್ವಾರ ಮಂಟಪವನ್ನು ದೇವಾಲಯ ಹೊಂದಿದೆ ದೇವಾಲಯದ ಉತ್ತರ ದಕ್ಷಿಣದ ಎರಡು ದ್ವಾರಗಳಿವೆ. ಹಾಗ ದ್ವಾರ ಮಂಟಪವನ್ನು ಹೊಂದಿದೆ .

ದೇವಾಲಯದ ಹೊರ ರಚನೆ:- ದೇವಾಲ ಯ ಮ ತ್ತು ನಂದಿ ಮಂಟಪ ಎರಡೂ ಜಗತಿಯ ಮೇಲೆ ನಿರ್ಮಾಣಗೊಂಡಿದೆ. ಜಗತಿಯು ದೇವಾಲಯಕ್ಕೆ ಹೊಂದಿಕೊಂಡಂತೆ ರಚನೆಯಾಗಿದೆ. ದೇವಾಲ ಯ ಹಾಗೂ ಜಗತಿಯ ನಡುವೆ 5 ಅಡಿ ಅಂತರದ ಜಾಗ ಖಾಲಿ ಇದೆ ಈ ರಚನೆಯು ಪ್ರದಕ್ಷಿಣ ಪಥ ಅಥವಾ ದೇವಾಲಯ ಎದ್ದು ಕಾಣಲು ಸಹಾಯಕವಾಗಿದೆ.

## ಮಲ್ಲಿಕಾರ್ಜುನ ದೇವಸ್ಥಾನ:

ಜಗತಿಯ ಪಕ್ಕದ ಮೆಟ್ಟಿಲುಗಳ ಪಕ್ಕ ಚಿಕ್ಕ ಚಿಕ್ಕ ಗೋಪುರಾಕಾರದ ದೇವಾಲಯಗಳನ್ನು ಹೊಂದಿದ್ದು ಸೂಕ್ಷ್ಮ ಕೆತ್ತನೆಯನ್ನು ಹೊಂದಿದೆ. ಹಿಂದೆ ಈ ಗೋಪುರದೊಳಗೆ ಶಿಲ್ಪಗಳಿದ್ದವು ಈಗ ಗೋಪುರದಲ್ಲಿ ಶಿಲ್ಪಗಳಿಲ್ಲ. ಈ ಗೋಪುರದ .ಮೇಲೂ ಹೊಯ್ಸಳರು ಸೂಕ್ಷ್ಮ ಕೆತ್ತನೆಯನ್ನು ಕೆತ್ತಿದ್ದಾರೆ. ದೇವಾಲಯದ ಮತ್ತೆ ಎರಡು ದ್ವಾರಗಳಾದ ಉತ್ತರ ದಕ್ಷಿಣ ದ್ವಾರಗಳು ಸಹ ಮೆಟ್ಟಿಲುಗಳನ್ನು ಹೊಂದಿದೆ. ಮೆಟ್ಟಿಲು ಗಳಿಗೆ ಹೊಂದಿಕೊಂಡಂತೆ ಮೆಟ್ಟಿಲುಗಳ ದ್ವಾರದ ಅಕ್ಕಪಕ್ಕ ದ್ವಾರಪಾಲಕರಂತೆ ಬಲ ಯುತವಾದ ಆನೆಗಳಿವೆ. ಬಾಗಿಲ ಸಮೀಪ ಉತ್ತರ ದಕ್ಷಿ ಣಕ್ಕೆ ದ್ವಾರಪಾಲಕರಿದ್ದ ಕುರುಹು ಇದೆ. ಕೇವಲ ದಕ್ಷಿಣ ದ್ವಾರದ ಮಾತ್ರಕಾಣಬಹುದು.

ದೇವಾಲಯವು 6 ಸಮನಾಂತರ ಪಟ್ಟಿಕೆಗಳನ್ನು ಹೊಂದಿದೆ. ಒಂದು ಪಟ್ಟಿಯೂ 7 ಇಂಚು ಎತ್ತರ ಹೊಂದಿದೆ. ಕೆಳಗಿನ ಪಟ್ಟಿಯ ಆನೆಗಳ ಸಾಲುಗಳನ್ನು ಹೊಂದಿದೆ. ಆನೆಗಳ ಸಾಲಿನ ಮೇಲೆ ಕುದುರೆ

ಸಾಲುಗಳನ್ನು ಕಾಣುತ್ತೇವೆ. ಕುದುರೆ ಸವಾರಿ ಮಾಡುವಂತೆ ಕೆತ್ತಲಾಗಿದೆ. ಕುದುರೆ ಸಾಲಿನ ಮೇಲ್ಭಾಗ ಸಿಂಹಗಳ ಸಾಲನ್ನು ಕೆತ್ತಿದ್ದಾರೆ. ಸಿಂಹಗಳ ಸಾಲಿನ ಮೇಲ್ಭಾಗ ಪುರಾಣ ಕಥೆಗಳನ್ನು ನಾಜೂಕಾಗಿ ಕೆತ್ತಿದ್ದಾರೆ. ಇದರ ಮೇಲ್ಭಾಗದಲ್ಲಿ ಯಕ್ಷ ಮತ್ತು ಕೀರ್ತಿಮುಖಗಳನ್ನು ಕೆತ್ತಲಾಗಿದೆ. ಇ ವುಗಳ ಮೇಲ್ಭಾಗದಲ್ಲಿ ಹಂಸಗಳ ಸಾಲನ್ನು ಕೆತ್ತಲಾಗಿದೆ. ಇದರ ಮೇಲ್ಭಾಗದಲ್ಲಿ ಹಂಸಗಳ ಸಾಲನ್ನು ಕೆತ್ತಲಾಗಿದೆ. ಗೋಡೆ ಭಾಗ ಸಮನಾಂತರವಾಗಿ ವಿಭಾಗಗೊಂಡ ಅಕ್ಕ ಪಕ್ಕದ ಗೋಡೆಯ ಮೇಲೆ ಕೆತ್ತನೆ ಮಾಡಲಾಗಿದೆ ಮೇಲೆ ಮಧ್ಯದಲ್ಲಿ ಸಂಧಿಸುವಂತೆ ಎರಡು ಕಪೋ ತಗಳನ್ನು ಕೆತ್ತಲಾಗಿದೆ.

ಗೋಡೆಯ ಮೇಲ್ಭಾಗವು ಒಂದು ಚಿತ್ರಕಲಾಕೃತಿ ನೋಡಿದಂತೆ ಕಾಣುತ್ತದೆ. 2.6 ಅಡಿ ಎತ್ತರದ ಈ ಗೋಡೆಯ ಮೇಲೆ ಹಲವಾರು ಶಿಲ್ಪಗಳನ್ನು ಕೆತ್ತಲಾಗಿದೆ. ಪ್ರತಿಯೊಂದು ಕೆತ್ತನೆಯ ಕೆಳಗೆ ಗೊಂಚಲು ಗೊಂಚಲಾದ ಪ್ರಭಾವಳಿ ರಚನೆಯಾಗಿದೆ. ಈ ಶಿಲ್ಪಗಳೆಲ್ಲಾ ಪೌರಾಣಿಕ ಕಥೆಗಳನ್ನು ಕಾಣಬಹುದಾಗಿದೆ. ಮೇಲ್ಭಾಗದ ಕಪೋತಗಳ ಸಾಲು ಅದಕ್ಕೆ ಹೊಂದಿಕೊಂಡು ಕಪೋತದ ಮೇಲ್ಭಾಗದ ಗೋಡೆಯ ತುಂಬಾ ಸೂಕ್ಷ್ಮವಾದ ಕೆತ್ತನೆಗಳಿಂದ ಕೂಡಿದೆ ಜೊತೆಗೆ ಗೋಡೆಗೆ ಹೊಂದಿಕೊಂಡತೆ ರಚಿಸಿರುವ ಚೌಕಸ್ತಂಭವನ್ನು ಕಾಣುತ್ತೇವೆ. ಇವುಗಳ ಮಧ್ಯ ಭಾಗದಲಿ ಸಣ್ಣ-ಸಣ್ಣ ಗೋಪುರಕಾರದ ಮೂರ್ತಿ ಕೆತ್ತನೆ ಇದೆ. ಇದರ ಮೇಲ್ಭಾಗದ ಗೋಡೆಯ ಸುತ್ತಲು ವಿಸ್ತಾರದಲ್ಲಿ ಕಪೋತಗಳಿವೆ. ಇದರ ಕೆಳಭಾಗದಲ್ಲಿ ಮರದಿಂದ ಕೆತ್ತಿರಬೇಕು ಎಂಬಂತೆ ಕಾಣುವ ಪಟ್ಟಿ ಕೆತ್ತನೆಗಳನ್ನು ಕಾಣಬಹುದು. ಇದರ ಕೆಳಭಾಗದಲ್ಲಿ ಸಣ್ಣ-ಸಣ್ಣ ಕೆತ್ತನೆಯನ್ನು ಹೊಂದಿರುವ ಅನೇಕ ಶಿಲ್ಪಗಳಿವೆ ಸಂಗೀತ ಸಾರಂಗವನ್ನು ನುಡಿಸುತ್ತಿರುವ ದೇವತಾ ಮೂರ್ತಿ ಮತ್ತು ರಸಭಾವ ಯುಕ್ತ ದೃಶ್ಯಾವಳಿಯ ಚಿತ್ರಗಳನ್ನು ಕೆತ್ತಲಾಗಿದೆ.

ಪಶ್ಚಿಮದ ಕಡೆಗಿರುವ ಮಾಳಿಗೆಯ ಶಿಖರವನ್ನು ಸೂಕ್ಷ್ಮವಾಗಿ ಕೆತ್ತಿದ್ದಾರೆ. ಬಾಹ್ಯ ರೇಖೆಯು ಪಿರಮಿಡಿನ ಆಕೃತಿಯಲ್ಲಿದೆ. ಅಲ್ಲಿಯೂ ಚಿಕ್ಕ-ಚಿಕ್ಕ ಕಿರಿದಾದ ಗೂಡುಗಳನ್ನು ಕೆತ್ತಿದ್ದಾರೆ. ಇಂತಹ ಎರಡು ಸಾಲಿನ ರಚನೆಯನ್ನು ನೋಡಬಹುದು ಕೊನೆಯಲ್ಲಿ ನೆತ್ತಿಯ ಮೇಲೆ ಶಿಖರ ಮತ್ತು ಸ್ತೂಪಿಯ ರಚನೆಯಿದೆ, ಒಂದೊಂದು ಸಾಲಿನ ಮೇಲೂ ಕಪೋತಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದೆ. ವಿಮಾನದ ಪ್ರತಿಯೊಂದು ಸಾಲಿನ ಪಟ್ಟಿಯನ್ನು ಸೂಕ್ಷ್ಮವಾಗಿ ಕೆತ್ತಲಾಗಿದೆ. ಗುಮಟ್ಟದ ಮುಂದೆ ಸುಖನಾಸಿ ಇದೆ.

ತ್ರಿಕೋನಾಕಾರದ ಗೋಡೆಯ ಭಾಗ ಹಾಗೂ ಗುಮ್ಮಟ ಕೊನೆಯವರೆವಿಗೂ ಇದೆ. ಮಾಳಿಗೆಯ ಮೇಲ್ಭಾಗದಲ್ಲಿ ಸಳ ಹುಲಿಯೊಂದಿಗೆ ಹೋರಾಡುತ್ತಿರುವ ಚಿತ್ರವಿದೆ. ಇಂದು ಇಲ್ಲಿ ವಿಮಾನ ನಾಶವಾಗಿದೆ. ಗೋಡೆಯ ಹೊರಭಾಗದಲ್ಲಿ ಹಲವಾರು ಶಿಲ್ಪಗಳನ್ನು ಕೆತ್ತಿದ್ದಾರೆ.

ಕಕ್ಷಾಸ್ಥಾನದ ಹಿಂಭಾಗದಲ್ಲಿ ಹಾಸುಗಲ್ಲಿಗೆ ಸಮನಾಂತರವಾಗಿ ಚಿಕ್ಕ-ಚಿಕ್ಕ ಸ್ತ್ರೀಪುರುಷರ ಚಿತ್ರಗಳನ್ನು ಕೆತ್ತಲಾಗಿದೆ. ದೇವಾಲಯದ ನಾಲ್ಕು ಕಡೆ ಗೋಡೆಯ ಮೇಲೂ ಕೆಲವು ಚಿತ್ರಗಳನ್ನು ಕೆತ್ತಿದ್ದಾರೆ. ದಕ್ಷಿಣ ಭಾಗದಲ್ಲಿ ಸರಸ್ವತಿ, ನಟರಾಜ, ನಾಲ್ಕು ಕೈಗಳ ನಟರಾಜ, ಆರು ಕೈಗಳ ನಟರಾಜ, ವೇಣುಗೋಪಾಲ, ಬ್ರಹ್ಮನ ಚಿತ್ರಗಳನ್ನು ಕಾಣಬಹುದು. ದಕ್ಷಿಣ ಗೋಡೆಯ ಮೇಲೆ ಶಂಕ ಚಕ್ರವನ್ನು ಹಿಡಿದು ಧ್ಯಾನ ಮಗ್ನನಾದ ವಿಷ್ಣುವಿನ ವಿಗ್ರಹವಿದೆ. ಪೂರ್ವದಲ್ಲಿ ಲಕ್ಷ್ಮಿನರಸಿಂಹನ ವಿಗ್ರಹವಿದೆ, ಪಶ್ಚಿಮದಲ್ಲಿ ಗಣೇಶ ಹೀಗೆ ಚಿಕ್ಕ-ಚಿಕ್ಕ ವಿಗ್ರಹಗಳ ಕೆತ್ತನೆಯು ಹೊಯ್ಸಳ ಶಿಲ್ಪಿಗಳ ಕೈಚಳಕ ಎಂದು ಹೇಳಬಹುದು.

ಗರ್ಭಗೃಹ ರಚನೆ:ದೇವಾಲಯ ಚೌಕಾರದ ಮೂರು ಗರ್ಭಗೃಹಗಳನ್ನು ಹೊಂದಿದೆ. ಪ್ರಧಾನ ಗರ್ಭಗೃಹವು ಪಶ್ಚಿಮ ದಿಕ್ಕಿನಲ್ಲಿದ್ದು, ಎತ್ತರವಾದ ಲಿಂಗವನ್ನು ಹೊಂದಿದೆ. ಉತ್ತರ ದಕ್ಷಿಣದಲ್ಲಿರುವ ಗರ್ಭಗೃಹಗಳು ಮೂಲ ರಚನೆಯನ್ನು ಈಗ ನೋಡಲು ಸಾಧ್ಯವಿಲ್ಲ. ದಕ್ಷಿಣ ದ ಗರ್ಭಗೃಹವು ಶಿಥಿಲವಾಗಿದೆ. ಪಶ್ಚಿಮದ ಗರ್ಭಗೃಹದ ಮೂರು ಕಡೆಯ ಗೂಡುಗಳಲ್ಲೂ ಹಿಂದೆ ಮೂರ್ತಿಗಳಿದ್ದವು ಈಗ ಖಾಲಿಯಾಗಿವೆ.ಗರ್ಭ ಗೃಹ ಮುಖದ್ವಾರದಲ್ಲಿ ಎರಡು ಶೈವದ್ವಾರ ಪಾಲಕರು ಮತ್ತು ವಾಸ್ತುಕಲೆ ಚೌಕಟನ್ನು ಹೊಂದಿರುವ ಎರಡು ಚೌಕ ಸ್ತಂಭಗಳಿವೆ. ಗೋಪುರ ಸಿಂಹಗಳಿಂದ ಸಮಿಶ್ರಗೊಂಡಿದೆ. ಸುಖನಾಸಿ ಭುವನೇಶ್ವರಿಯನ್ನು ಚೌಕಕಾರ ಮತ್ತು ದುಂಡಕಾರ ಹೊಂದಿದೆ. ಮಧ್ಯ ಭಾಗ ಹೂವಿನ ಗೊಂಚಲನ್ನು ನೇತು ಹಾಕಿರುವ ಹಾಗೆ ಕಂಡು ಬಂರುತ್ತದೆ. ದಕ್ಷಿಣ ಗರ್ಭಗೃಹವು ಭುವನೇಶ್ವರಿಯನ್ನು ಹೊಂದಿದೆ. ಅವುಗಳೂ ಕೂಡ ವೃತ್ತಾಕಾರ ಹಾಗೂ ಅಷ್ಟಕೋನಕೃತಿಯನ್ನು ಹೊಂದಿದೆ. ಇವುಗಳು ಪೂರ್ವದ ಗರ್ಭಗೃಹದ ಭುವನೇಶ್ವರಿಗೆ ಹೊಲಿಸಿದರೆ ಸ್ವಲ್ಪ ಸ್ಪಷ್ಟವಾಗಿ ಕಾಣಿಸುತ್ತದೆ. ಎತ್ತರದ ಗರ್ಭಗೃಹ ಕೂಡ ಭುವನೇಶ್ವರಿಯನ್ನು ಹೊಂದಿದೆ.

ಪಶ್ಚಿಮದ ಗರ್ಭಗೃಹದಲ್ಲಿ ಬಲಹರಿ ಶಿವಲಿಂಗವನ್ನು ಪ್ರತಿಸ್ಥಾಪಿಸಲಾಗಿದೆ. ದಕ್ಷಿಣ ಗರ್ಭಗೃಹ

ಶಿಥಿಲವ್ಯಸ್ಥೆಯಲ್ಲಿದೆ. ಮತ್ತೊಂದು ಗರ್ಭಗೃಹವಾದ ಉತ್ತರದ ಕಡೆಯಲು ನಾಗ-ನಾಗಿಣಿಯ ಶಿಲ್ಪಿಗಳಿವೆ. ಈ ಶಿಲ್ಪದಲ್ಲಿ ಶರೀರವು ಹಾವಿನ ಆಕಾರದಲ್ಲಿ ಮುಖವು ಮನುಷ್ಯಕೃತಿಯಲ್ಲಿದೆ. ಅವು ಎರಡು ಕೈಗಳನ್ನು ಹೊಂದಿದೆ. ನಾಗ ತನ್ನ ಬಲಗೈಯಲ್ಲಿ ಕತ್ತಿಯನ್ನು ಹಿಡಿದ್ದಿದ್ದರೆ ನಾಗಿಣಿ ತನ್ನ ಬಲಗೈಯಲ್ಲಿ ಕಳಶವನ್ನು ಎಡ ಗೈಯಲ್ಲಿ ಪದ್ಮವನ್ನು ಹಿಡಿದಿದಾಳೆ. ನಾಗಿಣಿ ಮೂರು ಎಡೆಯನ್ನು ಹೊಂದಿದ್ದರೆ, ನಾಗ ಐದು ಎಡೆಯನ್ನು ಹೊಂದಿದೆ. ಎರಡು ವಿಗ್ರಹಗಳನ್ನು ತುಂಬಾ ನಾಜುಕಾಗಿ ನಯವಾಗಿ ಕೆತ್ತಲಾಗಿದೆ. ಅವು ಕಿರೀಟ ಮತ್ತು ಕುಂದಲಿಯನ್ನು ಹೊಂದಿದೆ. ಮುಖ ಮುದ್ರೆಯು ಶಾಂತವಾಗಿದೆ. ಈ ಮೂರ್ತಿಶಿಲ್ಪವು ಸುಮಾರು 24 ಅಡಿ ಎತ್ತರ ಹೊಂದಿದೆ.

ಈ ದೇವಾಲಯವು ಪ್ರಧಾನ ಗರ್ಭಗೃಹ ಸುಖನಾಸಿಯನ್ನು ಹೊಂದಿದ್ದು, ಚೌಕಾರದಲ್ಲಿದೆ. ಇದು ಗರ್ಭಗೃಹಕ್ಕೆ ಹೊಂದಿಕೊಂಡಂತೆ ಇದ್ದು, ಗರ್ಭಗೃಹದ ಮಾದರಿಯಲ್ಲೇ ಇದೆ. ಇದರ ದ್ವಾರಗಳೂ ಕೂಡ ಗರ್ಭಗೃಹದಲ್ಲಿರುವ ಮಾದರಿಯಂತೆಯೇ ಇವೆ. ಆದರೆ ಸುಖನಾಸಿಯ ದ್ವಾರ ಹೆಚ್ಚು ಅಲಂಕಾರಿಕವಾಗಿವೆ. ಸುಖನಾಸಿಯ ಭುವನೇಶ್ವರಿಯ ಚೌಕಕಾರ ಮತ್ತು ಅಷ್ಟಕೋನಾಕೃತಿಯನ್ನು ಮತ್ತು ಒಂದರೊಳಗೊಂದು ವೃತ್ತವನ್ನು ಹೊಂದಿದೆ. ಭುವನೇಶ್ವರಿಯ ಮಧ್ಯ ಭಾಗದಲ್ಲಿ ಮೇಲಿನಿಂದ ಕೆಳಗೆ ಇಳಿಬಿಟ್ಟಿರುವ ಮೊಗ್ಗಿನಾಕಾರದ ಗೊಂಚಲಿದೆ.

ದಕ್ಷಿಣ ಗರ್ಭಗೃಹ: ದಕ್ಷಿಣದ ಗರ್ಭಗೃಹದಲ್ಲಿ ಮುಂಭಾಗ ಯಾವುದೇ ಸುಖನಾಸಿ ಇಲ್ಲ ಎರಡೂ ಗರ್ಭ ಗೃಹಗಳ ದರ್ಶನ ನೇರವಾಗಿ ಮಾಡಬಹುದು. ಇವು ನವರಂಗಕ್ಕೆ ಹೊಂದಿಕೊಂಡತೆ ಇವೆ.

<u>ನವರಂಗ:</u> ಈ ದೇವಾಲಯದ ನವರಂಗ ಸುಂದರವಾಗಿ ಕುಶಲ ಕಲೆಯಿಂದ ಕೂಡಿದೆ. ಚೌಕಾರದ ನವರಂಗದವು 9 ಅಂಕಣಗಳನ್ನು ಹೊಂದಿದೆ. ಇವು ವಿಸ್ತಾರದಲ್ಲಿ ಒಂದೇ ಸಮ ಅಥವಾ ಪ್ರಮಾಣದಲ್ಲಿ ರಚನೆಯಾಗಿದೆ. ಮದ್ಯದ ಅಂಕಣದಲ್ಲಿ ನಾಲ್ಕು ಕಂಬಗಳನ್ನು ಹೊಂದಿದೆ. ಈ ಒಂದೊಂದು ಕಂಬದ ತಳಪಾಯವು ಚೌಕಾರವಾಗಿದ್ದು, ಸ್ವಲ್ಪ ಮೇಲ್ಭಾಗಕ್ಕೆ ಒಂದಂತೆ ವೃತ್ತಾಕಾರವಾದ ರಚನೆಯನ್ನು ಕಾಣುತ್ತೇವೆ. ಅವು ಕೂಡ ಅಂತರ ಗೋಳ ಹಾಗೂ ಹೊರಕ್ಕೆ ಚಾಚಿದ ರಚನೆಯನ್ನು ಕಾಣಬಹುದು. ಇವು ಸೂಕ್ಷ್ಮ ಮತ್ತು ನಾಜುಕಾಗಿವೆ ಹಾಗೂ ಕಂಬಗಳನ್ನು ಹೆಚ್ಚು ಹೊಳಪು ಬರುವಂತೆ ಮಾಡಿದೆ. ಎರಡು ವೈಷ್ಣವ ದ್ವಾರಪಾಲಕರನ್ನು ಮುಖ್ಯದ್ವಾರದಲ್ಲಿ ಕೆತ್ತಲಾಗಿದೆ.

ಭುವನೇಶ್ವರಿ: 9 ಅಂಕಣದಲ್ಲಿಯೂ ಒಂದೊಂದರಂತೆ 9 ಭುವನೇಶ್ವರಿಗಳಿರಬೇಕಿತ್ತು. ಆದರೆ ಸದ್ಯಕ್ಕೆ 8 ಭುವನೇಶ್ವರಿಗಳಿವೆ ಮದ್ಯದಲ್ಲಿದ್ದಂತಹ ಭುವನೇಶ್ವರಿಯನ್ನು ಬೆಳಕು ಬರಲಿ ಎಂಬ ಉದ್ದೇಶದಿಂದ ಕಾಲಾನಂತರ ದುರದೃಷ್ಟವಶಾತ್ ತೆಗೆದು ಹಾಕಲಾಗಿದೆ. ಉಳಿದ ಎಂಟು ಭುವನೇಶ್ವರಿಯನ್ನು ಸೂಕ್ಷ್ಮವಾಗಿ ಕೆತ್ತಲಾಗಿದೆ. ಹಾಗೂ ಅವು ಸ್ಪಷ್ಟವಾಗಿ ಗೋಚರಿಸುತ್ತವೆ. ಭುವನೇಶ್ವರಿಗಳು ಸಾಮಾನ್ಯವಾಗಿ ಚೌಕಾಕಾರ, ಅಷ್ಟಕೋನಾಕಾರ ಹಾಗೂ ವೃತ್ತಾಕಾರವನ್ನು ಹೊಂದಿದೆ. ಕೆಲವು ಕಡೆ ನಕ್ಷತ್ರಾಕಾರವನ್ನೂ ಹೊಂದಿದೆ.

ಪಶ್ಚಿಮ ಪ್ರಧಾನ ಗರ್ಭಗೃಹದ ಛತ್ತಲ್ಲಿ ಸುಂದರ ಕಮಲಗಳಿದ್ದು ಅದರ ಬಾಗಿಲವಾಡವು ಪಂಚಶಾಲಾಂಕೃತವಾಗಿದ್ದು, ಬರಿದಾದ ಲಲಾಟದ ಮೇಲೆ ತ್ರಿಶಿಖರ ಹಾಗೂ ಸಿಂಹಗಳಿದ್ದು, ಇಕ್ಕೆಲ್ಲಗಳಲ್ಲಿ ನಂದಿ ದ್ವಾರಪಾಲಕರಿದ್ದಾರೆ ಅಂತರಾಳದ ಬಾಗಿಲವಾಡವು ಪಂಚಶಿಖರಾಲಂಕಾರ, ಜಾಲಂಧ್ರ ಹಾಗೂ ಶೈವದ್ವಾರ ಪಾಲಕರನ್ನು ಹೊಂದಿದ್ದು, ಆಕರ್ಷಕವಾಗಿದೆ. ನವರಂಗದ ಮದ್ಯ ಚರಕಿ ಯಂತ್ರ ನಿರ್ಮಿತ ನಾಲ್ಕು ಕಂಬಗಳಿವೆ. ಕಮಲ ಬೋದಿಗೆ ಇದ್ದು ಮದ್ಯದಲ್ಲಿ ಛತ್ತಿನ ಭುವನೇಶ್ವರಿ ಅಲಂಕಾರ ಇಂದು ಕಾಣು ತ್ತಿಲ್ಲ.

ನಾಗ-ನಾಗಿಣಿ ಇರುವ ಎತ್ತರದ ಗರ್ಭಗೃಹ ಬಾಗಿಲವಾಡವು ಪಂಚಶಾಂಕೃತವಾಗಿದೆ. ನಾಗ ನಾಗಿಣಿಯ ಜೊತೆಗೆ ಸೂರ್ಯನ ಸುಂದರ ಬಿಂಬಗಳಿವೆ. ಇಂದು ನಾಗ-ನಾಗಿಣಿ ಶಿಲ್ಪವಿರುವ ಗರುಡ ಪೀಠದಲ್ಲಿ ಹಿಂದೆ ವಿಷ್ಣುವಿನ ಮೂರ್ತಿ ಇತ್ತೆಂದು ಊಹಿಸಬಹುದಾಗಿದ್ದು, ವೈಷ್ಣವ ದ್ವಾರಪಾಲಕರಿದ್ದಾರೆ. ಶಿವಲಿಂಗಕ್ಕೆ ಎದುರಾಗಿ ನವರಂಗದಲ್ಲಿರುವ ನಂದಿಯೂ ಗಮನಾರ್ಹವಾಗಿದೆ. ಅಲ್ಲಿರುವ ನಾಲ್ಕು ದೇವಕೋಷ್ಟಗಳು ಕಿರುಗುಣಿಗಳಾಗಿದ್ದು ದ್ರಾವಿಡ ಮಾದರಿಯ ಸುಂದರ ಶಿಖರಗಳನ್ನು ಹೊಂದಿದ್ದು ಶಾರದೆ, ಗಣಪತಿ, ಮಹಿಷಾಸುರ ಮರ್ದಿನಿ ಹಾಗೂ ಸಪ್ತ ಮಾತೃಕಾ ಪಟ್ಟಿಕೆಗಳಿವೆ. ನವರಂಗವನ್ನು ಪ್ರವೇಶಿಸಲು ಇರುವ ಬಾಗಿಲವಾಡದ ಲಲಾಟದಲ್ಲಿ ತಾಂಡವೇಶ್ವರ ಶಿಲ್ಪವಿದ್ದು ಶೈವ ದ್ವಾರಪಾಲಕರು ಹಾಗೂ ಜಾಲಾಂದ್ರಗಳಿವೆ. ನವರಂಗದ ಪೂರ್ವಭಾಗ ಹಾಗೂ ಮುಖಮಂಟಪದ ಭಿತ್ತಿಗಳ ನಡುವೆ ಇರುವ ಜಾಲಾಂದ್ರಗಳು ಗಾಳಿ ಬೆಳಕನ್ನು ನೀಡುತ್ತವೆ. ನವರಂಗದ ಪೂರ್ವಭಾಗ ಮತ್ತು ಮುಖಮಂಟಪಗಳಲ್ಲಿ ಕಂಡುಬರುವ ಕಕ್ಷಾಸನಗಳಾದ ಮೂಲತಃ ಹಿಂದೆ ಇದ್ದ ತೆರೆದ ನವರಂಗ, ಅರ್ಧಮಂಟಪ ಹಾಗೂ ನಂದಿ ಮಂಟಪಗಳಿಗೆ ನಂತರ ಜಾಲಾಂದ್ರ ಭಿತ್ತಿಗಳ್ನು

ನಿರ್ಮಿಸಿ ಒಳಕ್ಕೆ ಸೇರಿಸಿ ಕೊಂಡಂತೆ ತೋರುತ್ತದೆ. ದೇವಾಲಯವನ್ನು ಪ್ರವೇಶಿಸುವ ಮುಖಮಂಟಪದ ಉತ್ತರ ದಕ್ಷಿಣಗಳಿಗೆ ಒಂದಾಗಿದೆ. ವೈಷ್ಣವ ದ್ವಾರಪಾಲಕ ಶಿಲ್ಪವಿದ್ದು ಉಳಿದೆರಡು ಕಣ್ಮರೆಯಾಗಿವೆ. ಮುಖ ಮಂಟಪದಲ್ಲಿರುವ ಆಳೆತ್ತರದ ನಂದಿ ಹಾಗೂ ದ್ವಾರಪಾಲಕರ ಶಿಲ್ಪಗಳು ಉತ್ಕೃಷ್ಠವಾಗಿವೆ. ಬಳಪದ ಕಲ್ಲಿನಲ್ಲಿ ನಿರ್ಮಿಸಿರುವ ಈ ದೇವಾಲಯಗಳಲ್ಲಿ ಕನಿಷ್ಠ ಏಳು ಮಾದರಿಯ ಕಂಬಗಳಿವೆ. ಭಿತ್ತಿಯಲ್ಲಿ ಅಡಿಯಿಂದ ಮುಡಿಯವರೆಗೆ ದೇವಲೋಕವನ್ನೇ ಸೃಷ್ಠಿಸಲಾಗಿದ್ದು ಪುರಾಣ ಶಿಲ್ಪಗಳಂತೂ ರಾಮಾಯಣ, ಮಹಾಭಾರತ, ಭಾಗವತಗಳೊಂದಿಗೆ ಮೈತುಂಬಿ ನಿಂತ ಮೇರುಗಿರಿ ಏನೋ ಎಂಬ ಭಾವನೆಯನ್ನು ಮೂಡಿಸುತ್ತದೆ. ಇಲ್ಲಿನ 1234 ರ ಶಾಸನದಲ್ಲಿ ಬರುವ ಮೊದಲಿಂದಂ ಕಳಶಂಬರಂ ಮೆರೆವ ನಾನಾ ಚಿತ್ರ ಪತ್ರಗಳಂ ಮುದಮಂ ಬೀರುವ ಭಾರತಾದಿ ಕಥೆಯಂ ನುಯ್ವೆತ್ತಿ ಕೂಟಂಗಳಿಂದಿದು ಪ್ರಾಂಚಾಳಿಕೆ ತಳ್ತ ಮೇರು ''ರಿಯೋ ಪೇಳೆಂಬಿನಂ ವಿಭ್ರಮಾಸ್ಪದಮಾಗಿಪ್ಪುದು ದೇವಾಲಯ'' ಎಂಬ ವರ್ಣನೆಯುನ್ನು ದೇವಾಲಯದ ಶಿಲ್ಪ ವೈಭವ ಮಾರ್ದನಿಸುತ್ತದೆ.

ನವರಂಗದ ಪೂರ್ವಭಾಗ ಹಾಗೂ ಮುಖಮಂಟಪಗಳಲ್ಲಿ ಕಂಡುಬರುವ ಭಾಗಶಃ ಹಾಳಾಗಿರುವ ಕಕ್ಷಾಸ್ಸನದ ಹಿಂಬದಿಯಲ್ಲಿರುವ ಮಿಥುನ ಶಿಲ್ಪಗಳೂ ಸೇರಿದಂತೆ ಹಲವಾರು ಸಾಮಾಜಿಕ ದೃಶ್ಯಗಳು ಸಮಕಾಲೀನ ಸಮಾಜವನ್ನು ನೈಜವಾಗಿ ಪ್ರತಿಬಿಂಬಿಸಿವೆ. ಅವುಗಳಲ್ಲಿ ರಾಮಾಯಣದ ವಾಲಿ ಸುಗ್ರೀವ ಯುದ್ಧ, ಕೈಲಾಸ ಎತ್ತುತ್ತಿರುವ ರಾವಣ ಮಹಾಭಾರತ ಮತ್ಸ್ಯಯಂತ್ರವೇದ್ಯ, ಕಿರಾತಾರ್ಜುನೇಯ ಚಕ್ರವ್ಯೂಹ, ಭಾಗವತದ ಕೃಷ್ಣ ಲೀಲಾ ದೃಶ್ಯ, ಗೋವರ್ಧನ ದಾರಿ ಮುಂತಾದವು ಮನೋಜ್ಞವಾಗಿ ಮೂಡಿ ಬಂದಿವೆ. ಅಧಿಷ್ಟಾನದ ಮೇಲಿರುವ ಎರಡು ಹಂತದ ಭಿತ್ತಿಯಲ್ಲಿ ಕೆಳಗಿನ ಹಂತವು ದೇವಾನುದೇವತೆಗಳ ಶಿಲ್ಪಗಳಿಂದ ಅಲಂಕೃತಗೊಂಡಿದ್ದರೆ ಮೇಲಿನ ಹಂತವು ಕಿರು ಶಿಖರ ಹಾಗೂ ಅಲಂಕಾರಿಕ ಸ್ತಂಭಗಳಾದ ಅಲಂಕರಿಸಲ್ಪಟ್ಟಿದ್ದು ಮೇಲಿನ ಹಂತವು ದೇವಾನುದೇವತೆಗಳ ಶಿಲ್ಪಗಳಿಂದ ಅಲಂಕೃತಗೊಂಡಿದ್ದರೆ ಜೊತೆಗೆ ಕಿರು ಶಿಖರ ಹಾಗೂ ಅಲಂಕಾರಿಕ ಸ್ತಂಭಗಳಿಂದ ಅಂಲಕರಿಸಲ್ಪಟ್ಟಿದ್ದು ವಲ್ಲಭಿ, ಪ್ರಸ್ಥಾರಗಳು ಅಲಂಕಾರಿಕ ಕಿರುಕೆತ್ತನೆಗಳಿಂದ ತುಂಬಿ ತುಳುಕುತ್ತಿದ್ದುದೆ ಸಮುದ್ರ ಮಂಥನ, ಷಣ್ಮುಖ, ಕಾಳಿಂಗ ಮರ್ಧನ ಕೇಶವ, ನಂದಿರೂಢಶಿವ, ಉಗ್ರನರಸಿಂಹ, ಹಯಗ್ರೀವ ನೃತ್ಯ ಭಂಗಿಯಲ್ಲಿರುವ ಲಕ್ಷ್ಮಿನರಸಿಂಹ, ಯೋಗನರಸಿಂಹ, ಅಭಯ ನರಸಿಂಹ, ಲಕ್ಷ್ಮಿನಾರಾಯಣ, ಸೂರ್ಯ, ಗಜಚರ್ಮಾಂಬರಧಾರಿ, ಶಿವ, ಹರಿಹರ, ವಿಷ್ಣು, ವಾಮನ, ಬಲಿಚಕ್ರವರ್ತಿ, ತ್ರಿಪುರಾಂತಕ, ಶಿವ,

ವಿಷ್ಣು- ಬ್ರಹ್ಮ- ಸರಸ್ವತಿ, ಊಮಾ ಮಹೇಶ್ವರಿ, ಗಣಪತಿ, 16 ಭುಜದ ದುರ್ಗಿ, ನಟರಾಜ, ಭೈರವ, ಗರುಡರೂಢ ವಿಷ್ಣು, ರತಿ-ಮನ್ಮಥ, ಮುಂತಾದ ಶಿಲ್ಪಗಳೊಂದಿಗೆ ಶುಕಸುಂದರಿ, ಚೌರಿಧಾರಿ, ಸಖಿಯರನ್ನೂ ಭಿತ್ತಿಯ ಮೇಲೆ ನೋಡಬಹುದಾಗಿದೆ. ಗರ್ಭಗುಡಿಯ ಮೇಲಿರುವ ದ್ರಾವಿಡ ಶಿಖರವನ್ನು ವೈವಿಧ್ಯಮಯ ಕಿರುಶಿಲ್ಪಗಳಿಂದ ಅಲಂಕರಿಸಲಾಗಿದೆ.

ದಕ್ಷಿಣಕ್ಕಿರುವ ಪ್ರಾಕಾರದ ದ್ವಾರಮಂಟಪದ ಮೂಲಕವೇ ದೇವಾಲಯದ ಆವರಣವನ್ನು ಪ್ರವೇಶಿಸಬೇಕಾಗಿದೆ. ಅದರ ಎತ್ತರವಾದ ಕಂಬ ಹಾಗೂ ಅದಿಷ್ಟಾನಗಳು ವಿಶೇಷ ಮೆರಗನ್ನು ನೀಡಿದ್ದು ಸಂಕೀರ್ಣವಾದ ಈಶಾನ್ಯ ಮೂಲೆಯಲ್ಲಿರುವ ಚಂಡಿಕೇಶ್ವರ ಗುಡಿಯ ಗರ್ಭಗೃಹದಲ್ಲಿ ಭೈರವನ ಶಿಲ್ಪವಿದ್ದು ಅದರ ಮುಂದೆ ಅರ್ಧಮಂಟಪವಿದೆ. ದೇವಾಲಯದ ಪೂರ್ವಕ್ಕೆ ಸುಮಾರು 20 ಅಡಿ ಎತ್ತರದ ಸ್ತಂಭದ ಮೇಲಿನ ಪೀಠದಲ್ಲಿ ಆನೆಯ ಮೇಲಿರುವ ಆಸೀನ ವೀರರ ಶಿಲ್ಪಕೆತ್ತನೆ ನಯನ ಮನೋಹರವಾಗಿದೆ.

## ಮರಡಿಪುರ:

ಈ ಗ್ರಾಮದ ಹಳೆಯೂರಿನ ಪ್ರದೇಶದ ಗದ್ದೆಯಲ್ಲಿ ಒಂದು ಶಾಸನಸಿಕ್ಕಿದೆ. ಶಾಸನದ ಕಾಲ ಶಕ 1202 ಪುಷ್ಯ 2. ಸೋಮವಾರ[26] ಈ ಶಾಸನದ ಉದ್ದೇಶ ಶಿವಶರಣರನ್ನು ಹೆಸರಿಸಿದ ಒಂದು ಶಾಸನವಿದೆ. ಶೈವ ಸ್ಲೋಕದಿಂದ ಪ್ರಾರಂಭವಾಗುವ ಈ ಶಾಸನವು ಶಿವನ ವರ್ಣನೆಯನ್ನು ಮಾಡಿ ದಾನದ ವಿಷಯವನ್ನು ತಿಳಿಸಿದೆ. ಈ ಶರಣರಲ್ಲಿ ಅನೇಕರು ಬಸವಣ್ಣನಿಗಿಂತ ಹಿಂದಿನವರು ಕೆಲವರು ಆತನ ಸಮಕಾಲೀನವರೂ ಆಗಿದ್ದಂತೆ ತೋರುತ್ತದೆ. ಕರಿಕಾಲಚೋಳ, ನಂಬಿಕುಂಬಾರಗುಂಡ, ಅಂಡವಲ ಮೊದಲಾದವರು ತಮಿಳು ನಾಡಿಗೆ ಸೇರಿದವರಾಗಿದ್ದು ಅವರನ್ನು ಗುರುತಿಸಲು ಸಾಧ್ಯವಿಲ್ಲ. ಬಾಣ, ಮಯೂರ, ಕಾಳಿದಾಸ ಇವರು ಪ್ರಸಿದ್ಧರಾದ ಕವಿಗಳು, ಕೇಶಿರಾಜ ದಣ್ನಾಯಕ ಎಂಬ ಹೆಸರಿನ ಪ್ರಸ್ತಾಪವಿದೆ. ಶಬ್ದಮಣಿದರ್ಪಣ ಬರೆದ ಕೇಶಿರಾಜನೋ ಅಥವಾ ದಣ್ನಾಯಕ (ದಂಡನಾಯಕ) ಹೊಯ್ಸಳರ 3ನೇ ಬಲ್ಲಾಳನ ಕಾಲಾವಧಿಯಲ್ಲಿ ಬರೆದಂತಹ ಶಾಸನವಾಗಿರುವುದರಿಂದ ಪ್ರಾಂತ್ಯದಲ್ಲಿ ನೇಮುಕಗೊಂಡ ದಂಡನಾಯಕನೋ ಎಂಬುದನ್ನು ತಿಳಿಯಬೇಕು. ಸುರಿಗೆಯ ಚಲ್ವಡರಾಯ ಸಂಗನಬಸವಯ್ಯ ಅನಿಮಿತಿ ಕೇಸವರಾಜ, ಜಗದೇವದಣ್ನಾಯಕ ಏಕಾಂತದ ರಾಮಯ್ಯ, ಸೊಂನಲಿಗೆಯ ರಾಮಯ್ಯ ಹುಲಿಗೆಯ ಪೊನ್ನಯ, ನೆಲುವಿಗೆ ಶಾಂತಯ್ಯ, ಸಕಲಗಣಪರಿವೇಷ್ಠಿತ ಎಂಬ

ಶಿವಶರಣರ ಹೆಸರನ್ನು ಶಾಸನದಲ್ಲಿ ಪ್ರಸ್ತಾಪಿಸಿದೆ. ಈ ಕವಿಗಳನ್ನು ಶಿವಭಕ್ತರೆಂದು ಪರಿಗಣಿಸಲಾಗಿದೆ. ಬೋಗದೇವನನ್ನು ಕೆಂಬಾವಿಯ ಬೋಗಣ್ಣನೆಂದು ವಿದ್ವಾಂಸರಾದ ಡಾ॥ ಎಂ.ಎಂ.ಕಲ್ಬುರ್ಗಿಯವರು ಗುರುತಿಸಿದ್ದಾರೆ. ಆದರೆ ಅವನನ್ನು ಬಾಣ ಮಯೂರಾದಿಗಳ ಜೊತೆಯಲ್ಲಿ ಹೇಳಿರುವುದರಿಂದಲೂ ಬೇರೆ ಶಾಸನಗಳಲ್ಲಿ ಬೋಜ ಎಂಬ ಹೆಸರು ಬರುವುದರಿಂದಲೂ ಭೋಗದೇವನು ಪ್ರಸಿದ್ಧ ಕವಿಯಾದ ಭೋಜನಾಗಿರುವ ಸಾಧ್ಯತೆ ಇದೆ. ಶಾಸನದಲ್ಲಿ ನವಿಲೆಎಂಬ ಪದ ಬಂದಿದೆ. ನವಿಲೆ ರಾಯಚೂರು ಜಿಲ್ಲೆಯಲ್ಲಿ ಬರುವ ಒಂದು ಊರು ಶಾಸನದಲ್ಲಿ ಅನೇಕ ಶರಣರನ್ನು ಹೆಸರಿಸಿದೆ. ಮೇಲ್ಕಂಡ ಸಕಲ ಗಣಪರಿವೇಷ್ಠಿತ ಶ್ರೀಕಲಿದೇವರ ಪ್ರಸಸ್ತಿಯಾಗಿದೆ. ನವಿಲೆಯ ಜೆಡೆಯ ಶಂಕರದೇವನ ಪಡಿಹಾರ ದಾಸ್ಯಯ್ಯ ಎಂಬುವವನು ಶಿವಭಕ್ತ ಈತನು ಕುಲಸ್ವಾಮಿ ಜೆಡೆಯ ಶಂಕರದೇವ ಈ ದೇವರು "ತೇತ್ರಿಂಸಾದಿ ಕೋಟಿದೇವರ್ಕ್ಗಳು ಪೂಜಿತ". ಅಂದರೆ ಜೆಡೆಯಶಂಕರ ದೇವನನ್ನು ಸಕಲದೇವರುಗಳ ಒಕ್ಕಲುಗಳೂ ಬೇಧಭಾವವಿಲ್ಲದೆ ಪೂಜೆ ಮಾಡುವರು. ಈ ದೇವರು ಎಲ್ಲಾ ಅಂದಾಕಾರ, ಜನರ ವಾದವನ್ನು ಹೋಗಲಾಡಿಸುತ್ತದೆ. ಇವನನ್ನು ತ್ರಿಪುರ ಸಂಹಾರಿ ಶಿವನ ಮೂರ್ತಿಯನ್ನು ನಾರಾಯಣನನ್ನು ಪೂಜಿಸುವ ಬೋಜ, ಬಾಣನಾದರ ಮುನಿಗಳು ಇವರೆಲ್ಲರಿಗೂ ಶಿವಾಚಾರವೇ ಮಾರ್ಗ, ಆತನನ್ನು ಅರ್ಕೇಶ್ವರ, ನಂದಾನಾಥ, ನಂದಿಮಹಾತಾಳ, ವೀರಭದ್ರ, ಬ್ರಿಂಗಿನಾಥ, ಅಂಗಜ, ಅತಿಗೀವ ಮಯಗ್ರೀವ, ಘಂಟಾಕರ್ಣ, ರೇಣುಕ, ರುದ್ರ ಮುಂತಾದ ಪದವಿಗಳಿಂದ ಕರೆಯುವರು. ಜನ ವಿವಿಧ ಹೆಸರುಳಾತ ಈತನನ್ನು ಪೂಜಿಸುವರು ಇಹಪರ ಎಲ್ಲಾ ಲೋಕದಲ್ಲೂ ದಾಸರಿಂದಲೂ ಪೂಜಿಸಲ್ಪಡುವನು ಇವರಲ್ಲದೆ ಕವಿವಾರ್ಯರಾದ ಮಯೂರ, ಕಾಳಿದಾಸ ಕೇಶಿರಾಜ ದಂಡನಾಯಕ ಶರಣರಾದ ಸುರಿಗೆಯ ಚಲ್ವಡರಾಯ, ಸಂಗನಬಸವಯ್ಯ ಏಕಾಂತದ ರಾಮಯ್ಯ, ಸೊನಲಿಗೆ ರಾಮಯ್ಯ, ಹುಲಿಗೆರೆಯ ಪೊನ್ನಯ್ಯ,ನಲ ಉವಿಗೆಯ ಶಾಂತಯ್ಯ ಹೀಗೆ ಸಕಲ ಕವಿ, ಶರಣ ವರ್ಯರೂ ಪೂಜಿಸುವ ಶ್ರೀ ಕಲಿ ದೇವರ ಹೆಸರಿಗೆ ಬರೆದು ಕೊಟ್ಟ ಪ್ರಶಸ್ತಿ ಪತ್ರ.

ಗುತ್ತಲು:

ಇಲ್ಲಿ ತಲಕಾಡು ಗಂಗ ಕಾಲದಲ್ಲಿ ಕ್ರಿ.ಶ.788ರಲ್ಲಿ ನಿರ್ಮಿತವಾದ ಪ್ರಸಿದ್ದ ಅರಕೇಶ್ವರ ದೇವಾಲಯವಿದೆ. ಇದು ಮೊದಲು ಬಸದಿಯಾಗಿತ್ತು ಎಂದು ಪ್ರತೀತಿ ಈ ಊರಿಗೆ ಅರ್ಕಗುತ್ತಿ ಪ್ರತೀತಿ ಅರ್ಕಗುತ್ತಿಪುರಂ, ಅರ್ಕಗುಪ್ತಿಪುರ, ಅರ್ಕಪುರವಿಂದೆಲ್ಲ ಕರೆಯುತ್ತಿದ್ದರು.

ಗುತ್ತಲು ಹಿಂದೆ ಪಳೇಯ ಪಟ್ಟಾಗಿತ್ತು ಇಲ್ಲಿನ ಕೋಟೆಯ ಕುರುಹು ಊರಿನ ಪೂರ್ವದಲ್ಲಿ ಆಂಜನೇಯ ದೇವಾಲಯ ಪಕ್ಕದಲ್ಲಿದೆ. ಸಮಿಪದಲ್ಲಿ ಗುತ್ತಲು ಮಾರಮ್ಮ ದೇವಿಯ ಗುಡಿ ಇದೆ. ವಾಯುವ್ಯಕ್ಕೆ ಗುತ್ತಲು ದೇವಮ್ಮ ಗುಡಿಯಿದೆ. ಅರಕೇಶ್ವರ ದೇವಾಲಯದ ಹಿಂಭಾಗಕ್ಕೆ ಸಪ್ತ ಮಾತೃಕೆಯರ ಗುಡಿಯಿದೆ. ಆಗ್ನೇಯಕ್ಕೆ ಕಾಳಿಕಂಭ ದೇವಾಲಯ ಮತ್ತು ಸಮೀಪದಲ್ಲಿ ಮಾಸ್ತಮ್ಮ ದೇವಿಯ ದೇವಾಲಯವಿದೆ.

ಗುತ್ತಲಿನ ಅರಕೇಶ್ವರ ದೇವಾಲಯವು ಜೆನಬಸತಿಯಾಗಿತ್ತೆಂಬ ಅಂಶವು ಈ ಗುಡಿಯ ಜೀರ್ಣೋದ್ಧಾರ ಕಾಲದಲ್ಲಿ ಪತ್ತೆಯಾದ 1034ರ ಶಾಸನದಿಂದ ವೇದ್ಯವಾಗುತ್ತದೆ. ಗಂಗರಾಜ ಲೋಕ ವಿದ್ಯಾಧರನ ನಿರ್ಮಾಣವನ್ನು ದಾಖಲಿಸಿರುವ ನಿಶಿಧಿ ಶಾಸನ ಇದಾಗಿದ್ದು, ಗಂಗರ ಕೊನೆಯ ಅರಸುಗಳ ಬಗ್ಗೆ ಬೆಳಕನ್ನು ಚೆಲ್ಲುವ ಈ ಶಾಸನವನ್ನು ಆಧಾರವಾಗಿಟ್ಟು ಮುಂದಿನ ಗಂಗರ ಇತಿಹಾಸವನ್ನು ಗುರುತಿಸಬಹುದೆಂದು ಡಾ||ಹಂ.ಪಾ. ನಾಗರಾಜಯ್ಯ ಅಭಿಪ್ರಾಯ ಪಟ್ಟಿದ್ದು ಗಂಗರ ಭಿನ್ನ ಶಾಖೆಗಳನ್ನು ತಿಳಿಸುವಲ್ಲಿ ಮಂಡ್ಯ ಜಿಲ್ಲೆಯ ಗಂಗರ ಶಾಸನಗಳ ಮಹತ್ವದ ಪಾತ್ರವನ್ನು ವಹಿಸುತ್ತದೆ.

ಗುತ್ತಲಿನಲ್ಲಿ ಸುಮಾರು 6 ಶಾಸನಗಳು ದೊರೆತಿವೆ. ಒಂದು ಊರಬಾಗಿಲಿನ ಮುಂದೆ ಪೂರ್ವಕ್ಕೆ ನೆಟ್ಟ ಕಲ್ಲು. ಆದರೆ ಇದರಲ್ಲಿ ಹೆಚ್ಚಿನ ಮಾಹಿತಿಗಳಿಲ್ಲ ಮತ್ತೊಂದು ಶಾಸನ ಗೋಪಾಲಸ್ವಾಮಿ ದೇವಸ್ಥಾನದ ಎದುರಿಗೆದೆ. ಈ ಶಾಸನವು 3ನೇ ವೀರಬಲ್ಲಾಳದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಶಾಸನದ ಕಾಲಾವಧಿ ಕ್ರಿ.ಶ.ಮೇ.27 ಶಾಸನವು ಒಂದು ದಾನ ಶಾಸನವಾಗಿದೆ ಕೆಂಪೇಗೌಡನ ಮಗನಾಗಿದ್ದ ಗುಡಿತಮ್ಮ ಒಣಬೂಮಿ ಮತ್ತು ನೀರಾವರಿ ಭೂಮಿಯನ್ನು ಪಡೆದ ಬಗ್ಗೆ ತಿಳಿಸುತ್ತದೆ. ಈ ದಾನವನ್ನು ಗೋಪಾಲ ದೇವನ ಮಕ್ಕಳಾದ ವಿಷಣ್ಣ ಮತ್ತು ಹಾಲಪ್ಪ ಎಂಬಿಬ್ಬರು ನೀಡಿದರು. ಇದರ ಉದ್ದೇಶ ಅಗ್ರಹಾರ ಮಲ್ಲಿಕಾರ್ಜುನಪುರ ಅಥವಾ ಗುತ್ತಲು ಪ್ರದೇಶದ ವ್ಯಾಪ್ತಿಗೆ ಸೇರಿಸಲು ಶಾಸನದ ಎರಡೂ ಭಾಗದಲ್ಲೂ ಬರಹಗಳಿವೆ. ಸಾಮಾನ್ಯ ಶಾಸನವನ್ನು ಕೆತ್ತಿಸುವವರು ಸಮಯದಲ್ಲಿ ಯಾವ ರಾಜ ಆಳ್ವಿಕೆ ಮಾಡುತ್ತಿದ್ದ. ಎಂಬುದನ್ನು ತಿಳಿಸುತ್ತದೆ. ಹಾಗೆಯೇ ಈ ಶಾಸನವು ಪ್ರತಾಪ ಚಕ್ರವರ್ತಿ ಹೊಯ್ಸಳ ಶ್ರೀ ವೀರಬಲ್ಲಾಳ ದೇವರಸರು ದೋರಸಮುದ್ರದಲ್ಲಿ ರಾಜ್ಯ ಕಟ್ಟಿ ಸುಖ ಸಂತೋಷದಿಂದ ರಾಜ್ಯವಾಳುತ್ತಿರೆ ಎಂಬ ಪದ ಪ್ರಯೋಗವಿದೆ ಇದು ಅವರು ಸ್ವತಂತ್ರವಾಗಿ ಆಳ್ವಿಕೆ ಮಾಡಿತ್ತಿದುದನ್ನು ತಿಳಿಸುತ್ತದೆ. ಶಾಸನದಲ್ಲಿ ವೀರಬಲ್ಲಾಳ ದೇವರಸರು ಎಂಬುದಾಗಿ ತಿಳಿಸಿದೆ.

ಶಾಸನದ ಕಾಲಾವಧಿ ಅನ್ವಯ ಅದು ಮೂರನೇ ವೀರಬಲ್ಲಾಳನ ಕಾಲಕ್ಕೆ ಸೇರಿದೆಂದು ತಿಳಿಯಬಹುದು.

ಮಲ್ಲಿಕಾರ್ಜುನ ಪುರವಾದ ಗುತ್ತಲಿನ ಅಗ್ರಹಾರವನ್ನು ಬಸದಿಹಳ್ಳಿಯ ಮಧುರೆಯ ಕುಲದ ಕೆಂಪೆಗೌಡನ ಮಕ್ಕಳಾದ ಗುಡಿತಮ್ಮನಿಗೆ ಕೊಟ್ಟ ಶಿಲಾಶಾಸನದ ವಿವರಗಳನ್ನು ತಾವರೆಗೆರೆಯ ಹಿರಿಯ ತುಂಬಿನ ಕೆಳಗೆ ಕೊಟ್ಟ ಕಂಬಿ ಮಹದ ಕೊಡಿಗೆ ಜಮೀನು ಯಾರ್‍ಯಾರಿಗೆ ಎಷ್ಟೆಷ್ಟು ಎಂಬುದನ್ನು ವಿವರಿಸಿದೆ ವಿಸ್ಯಂಣ್ಣಾಂಗಳ ಭಾಗ ಎಂದಿದೆ. ಅಂದರೆ ವಿಶಾಲವಾದ ಭೂಪ್ರದೇಶಗಳನ್ನು ಆಡಳಿತದ ದೃಷ್ಟಿಯಿಂದ ಹಲವು ವಿಭಾಗಗಳಾಗಿ ಮಾಡಿ ಆಡಳಿತವನ್ನು ಇಂದು ಹೇಗೆ ಜಿಲ್ಲೆ ತಾಲ್ಲೂಕು ಹೋಬಳಿ ಇದೆಯೋ ಹಾಗೆ ವಿಷಯ ಎಂಬುದು ಒಂದು ಆಡಳಿತದ ವಿಭಾಗ ಅಂತಹ ವಿಷಯ ಪ್ರದೇಶದಲ್ಲಿ ಸ.1, ಕೊ.10 ಗದ್ದೆಯ ತಮ್ಮಡಿ ಹಳ್ಳಿಯ ವಿಷಯದ ಭಾಗದಲ್ಲಿ ಕೊಡುಗೆ ನೀಡಿದೆ ಎಂದಿದೆ ಸ.1, ಕೊ 10 ಎಂಬುದು ಅಂದಿನ ಭೂಮಾಪನವಾಗಿದೆ ಅಥವಾ ವಿಸ್ತೀರ್ಣವಾಗಿದೆ. ಇದಿಷ್ಟು ಹಾಗೂ 400 ಸುಳಿ ಬೆದ್ದಲನೂ ಬಸದಿ ಹಳ್ಳಿಯಿಂದ ತೆಗೆದು ಕೊಂಡ ಭೂಪ್ರದೇಶವನ್ನು ಗೌವುಡಿ ತಮ್ಮರಿಗೆ ಸಣ್ಣ ಗೌಡನ ಮನೆಯಿಂದ ಮೂಡಲು 30 ಕೊಳಗೆ ಗದ್ದೆಗೆ 15 ಕೈಮನೆಗೆ ಕೊಡುಗೆಯಾಗಿ ಪ್ರತಿ ವರ್ಷ ನೀಡಿದೆ 8 ತೆರುವರು ಗುತ್ತಲು ಗೌಡಗಳ ಮರಿ ಆದಿಯ ಬೆಳುಕಾಡಿನ ಬಳಿಯ ತೆರ ಇವು ಆಲಪ್ಪ ಗೌಡ ತಮ್ಮಗೆ ಕೊಟ್ಟ ಶಾಸನ ಇದಕ್ಕೆ ಸಾಕ್ಷಿ ಧರಣಿಯಲ್ಲಿರುವ ದೇವತಾಗಣಗಳು ಗುತ್ತಲ ಸಾಲ್ವರು ಗೌಡಗಳು, ಸ್ಥಾನಿಗಳು ನಾಲ್ವರು ಕುಂಬಾರು, ಹೆಗ್ಗಡಿಗು, ಕನಬೋವನೊಳಗಾದ ನಾಲ್ವರು, ಬೋವಿ ಜನಾಂಗದವರು ಅಚೋಜ ಜಕೋಜ, ಅಗಸರ ಬೀಮ, ನಾಯಿಂದ ಜನಾಂಗದ, ಹೆಬ್ಬಹೊಲೆಮಂಡನಾಯಕ, ಗುತ್ತಲು ಪಂಡಿತರ ಬರೆಯಪ್ಪ ಅಂದರೆ ಶಾಸನ ಬರೆಯುವನು ಬರೆದಂತಹ ಶಾಸನದ ವಿವರಗಳಿವು.

ಇಲ್ಲಿ ಸಾಕ್ಷಿಯಾಗಿ ಈ ಪ್ರದೇಶ ದಲ್ಲಿರುವ ಎಲ್ಲಾ ಜನಾಂಗದವರನ್ನು ಅವರಲ್ಲಿ ನಾಲ್ವರು ಪ್ರತಿನಿಧಿಗಳನ್ನು ಅವರ ಪ್ರತಿನಿಧಿಯಾಗಿ ಭಾಗವಹಿಸಿ ದಾನದ ವಿಷಯಕ್ಕೆ ಸಾಕ್ಷಿಯಾಗಿದ್ದು, ಅವರ ಸಮ್ಮುಖದಲ್ಲಿ ಜೊತೆಗೆ ಬರೆದ ಶಿಲ್ಪಿಯ ಹೆಸರನ್ನು ಸಹ ಶಾಸನದಲ್ಲಿ ಬರೆಯಿಸುವ ಪದ್ಧತಿಯಂತೆ ಬರೆಯಿಸಿದ್ದಾರೆ. ಇದು ಈ ಶಾಸನದ ಸಾರಾಂಶ. ಗುತ್ತಲಿನ ಮತ್ತೊಂದು ಶಾಸನವು ಅರ್ಕೇಶ್ವರ ದೇವಸ್ಥಾನದ ಹಿಂಭಾಗದ ತಳಪಾದದ ಮೇಲಿದೆ . ಈ ಶಾಸನವು ಸುಮಾರು 13-14ನೇ ಶತಮಾನಕ್ಕೆ ಸೇರಿದ್ದ ಈ ಶಾಸನವು ಚಾಮಯ್ಯ ಕೆರೆಯ ಭೂ ಪ್ರದೇಶ ಕೆಳಗಡೆ ಪ್ರದೇಶವನ್ನು ದಾನ ನೀಡಿದ ವಿಚಾರವನ್ನು ತಿಳಿಸುತ್ತದೆ.

ಅರ್ಕೇಶ್ವರ ದೇವಸ್ಥಾನದ ಅರ್ಚಕ ದೇವಲಿಂಗಯ್ಯನವರ ಬಳಿಯಲ್ಲಿ ತಾಮ್ರಶಾಸನವಿದೆ ಅದು ಕನ್ನಡ ಭಾಷೆಯಲ್ಲಿದೆ. ಈ ಶಾಸನವು ಬ್ರಾಹ್ಮಣರು ಮತ್ತು ಕೆಂಪು ಒಡೆಯರ್ ನಡುವೆ ನಡೆದ ವಿವಾದವನ್ನು ತಿಳಿಸುವ ಶಾಸನವಾಗಿದೆ. ಹಿರಿ ಅರ್ಕೇಶ್ವರ ಸ್ವಾಮಿ, ದೇವಯ್ಯ, ಶಿಡಲ್ಲು ಬಸವೇಶ್ವರ, ಭೈರವೇಶ್ವರ ದೇವರ ಆರಾಧಿಸುವ ಕೆಂಪು ಅರ್ಚಕರಿಗೂ ಬ್ರಾಹ್ಮರಿಗೂ ವಿರೋಧ ಹುಟ್ಟಿದ್ದ ವಿಚಾರವನ್ನು ತಿಳಿಸಿ ಕೊಡುತ್ತದೆ. ಅಲ್ಕಿಗುಪ್ತಿಪುರವಾದ ಗುತ್ತಲಿನ ಬ್ರಾಹ್ಮಣರಿಗೂ ಸ್ಥಳದ ಅನೇಕ ದೇವರುಗಳ ಪೂಜೆಯನ್ನು ನಿರ್ವಹಿಸುತ್ತಿದ್ದ ಕೆಂಪು ಅಕ್ಕಿ ಒಡೆಯರ್ ಒಡೆಯ ಉಂಟಾದ ವಿವಾದ ಪೂಜೆಯ ಪಕ್ಕಿನ ಬಗೆಗೆ ಉಂಟಾದದು ಸ್ಥಳದ ಪಾಳೇಗಾರ ಶಿವೋಜಿನಾಯಕ ಮತ್ತು ಅಮಲ್ದಾರ್ ಯೆಂಕಪ್ಪ ನಾಯಕರಿಗೆ ಫಿರ್ಯಾದನ್ನು ಕೊಡಲಾಯಿತು. ಆ ನಂತರ ಮಹಾನಾಡಿನವರು ದೇಶದವರು ಶಾನುಭೋಗ ಮತ್ತು ಇನ್ನೂ ಕೆಲವು ಪ್ರಮುಖ ವ್ಯಕ್ತಿಗಳು ಸೇರಿ ಕುದಿಯುವ ತುಪ್ಪದಲ್ಲಿ ಕೈಯನ್ನು ಅದ್ದುವ ದಿವ್ಯದಿಂದ[28] ವಿವಾದ ವನ್ನು ಪರಿಹರಿಸಿ ಬೇಕೆಂದು ತೀರ್ಮಾನಿಸಿದರು. ಅಕ್ಕಿ ಒಡೆಯಸು ಮೂರು ಬಾರಿ ತುಪ್ಪದಲ್ಲಿ ಕೈಯನ್ನು ಅದ್ದಿ ಜಯಶೀಲನಾದ ನಂತರ ದೇವಾಲಯಗಳಿಗೆ ಆಸ್ತಿಯನ್ನು ಮತ್ತು ಪೂಜೆಯ ಹಕ್ಕನ್ನು ಆತನಿಗೆ ನೀಡಲಾಯಿತು.

ಪೂಜೆಯ ಹಕ್ಕಿನ ವಿಚಾರ ಎಲ್ಲಿಂದ ಹೇಗೆ ಪ್ರಾರಂಭ ಎಂಬ ಸಂಪೂರ್ಣ ಮಾಹಿತಿಯನ್ನು ಶಾಸನದಲ್ಲಿ ತಿಳಿಸಿದೆ. ಇಬ್ಬರ ನಡುವಿನ ವಿವಾದದಿಂದ ಮೂರನೇಯ ದಿವಸ ಪೂಜೆ ನಿಂತಿತ್ತು ಇದರಿಂದ ಬ್ರಾಹ್ಮಣರು ನಷ್ಟಹೊಂದಿದರು. ಚೌಕಿ ಮಠದ ಸ್ವಾಮಿಗಳು ಜೊತೆಗೆ ಹಾಕಿ ಬ್ರಾಹ್ಮಣರು ಪಾಳೇಗಾರ ನಿವೋಜಿ ನಾಯಕರಿಗೆ ಅಮಲ್ದಾರ ಪಟೇಲರಿಗೆ ಪಿರ್ಯಾದಿ ನೀಡಿದರು. ನರಸಪ್ಪನವರು, ನಾಣಪ್ಪನವರು, ಖಟಪ್ಪನವರು, ಐಯ್ಯಪ್ಪನವರು, ಕೃಷ್ಣಪ್ಪನವರು, ಶೇಷಭಟ್ಟ ದೇಸ ಶ್ಯಾನುಬೋಗ, ಸರಸಯ್ಯನವರು ಮಹಾನಾಡುದೇಶದ ಜನರು ಸೇರಿ ದೇಶದ ಸಿದ್ದಲಿಂಗಶೆಟ್ಟರು, ಬೂದಿಶಿವಶೆಟ್ಟರು, ಸಿದ್ದಲಿಂಗಶೆಟ್ಟರು, ಚಂದ್ರಪ್ಪಶೆಟ್ಟರು, ಜಲ್ಲಿಂಗಚಾರು, ಆಂಕಾಚಾರಿ, ಪುಟ್ಟಾಚಾರಿ, ಗೋಟ ಅಡಿಕೆ ದೇವೇಗೌಡ, ಅಂಕೇಗೌಡ, ದೇವರಸೇಗೌಡ, ಅವರಿಅಂಕನ ಅರ್ಕೇಗೌಡ, ಚನ್ನೇಗೌಡ, ಈಡಿಗರ ಕಾಳೇಗೌಡ, ಕುಂಬಾರರ ಚೌಡಶೆಟ್ಟಿ ಇಷ್ಟು ಜನ ಸೇರಿ ಅರ್ಕೇಶ್ವರ ದೇವಸ್ಥಾನದ ಕಬ್ಬಿಣದ ಖೊಪರಿಗೆ ತುಪ್ಪಹಾಕಿ ದಿವ್ಯ ಪರೀಕ್ಷೆ ಮಾಡಿಸಿದರು. ದಿವ್ಯ ಎಂಬುದು ಒಂದು ವಿದದ ತಪ್ಪನ್ನು ಸಾಬೀತು ಪಡಿಸುವ ಪರೀಕ್ಷೆ ಹಿಂದೆ ವ್ಯಕ್ತಿಯು ಅಪರಾಧಿಯೋ ಅಲ್ಲವೋ ಎಂಬುದನ್ನು ಕಂಡು ಹಿಡಿಯಲು ದೇವಸ್ಥಾನದ

ಆವರಣದ ಮುಂದೆ ಸಾಬೀತು ಪಡಿಸುತ್ತಿದ್ದರು. ದೇವಾಲಯ ನ್ಯಾಯಾಲಯದ ಕಾರ್ಯ ನಿರ್ವಹಿಸುತ್ತಿತ್ತು. ಅಪರಾಧ ನಿರ್ಣಯಕ್ಕೆ ಮಾನುಷಲಾದ ಸಾಕ್ಷಿ ಯಾವುದೂ ಇಲ್ಲದಿರುವಾಗ ದೈವವನ್ನು ಆಶ್ರಯಿಸುತ್ತಿದ್ದರು. ಆದ್ದರಿಂದಲೇ ಅದನ್ನು ದಿವ್ಯವೆಂದು ಕರೆದಿರುವುದು ಇದನ್ನು ಇಂಗ್ಲೀಷ್‌ನಲ್ಲಿ Ordeal ಎಂದು ಕರೆಯುತ್ತಾರೆ. Ordeal ಎಂಬ ಪದಕ್ಕೆ ಭಗವಂತನು ತೀರ್ಪು ಎಂಬುದು ಮೂಲಾರ್ಥ ಹೆಚ್ಚು ಕಡಿಮೆ ಪ್ರಪಂಚದಾತ್ಯಂತ ಈ ಸಾಂಪ್ರಾದಾಯವು ಸಾವಿರಾರು ವರ್ಷಗಳಿಂದ ಬೆಳೆದುಕೊಂಡು ಬಂದಿದೆ. ಭಾರತ ಖಂಡದಲ್ಲಿ ದಿವ್ಯವನ್ನು ಸ್ಮೃತಿಗಳೂ ನ್ಯಾಯಗ್ರಂಥಗಳು ಮಾನ್ಯ ಮಾಡಿವೆ ದಿವ್ಯವನ್ನು ನಡೆಸಲು ಬೇಕಾದಷ್ಟು ನಿಯಮಗಳನ್ನು ಹಾಕಿದ್ದಾರೆ ಯಾರಿಗೆ ಯಾವ ರೀತಿಯ ದಿವ್ಯ ಯಾವ ಕಾಲದಲ್ಲಿ ನಡೆಯಿಸಬೇಕು. ದಿವ್ಯವನ್ನು ನಡೆಸುವಾಗ ವಹಿಸಬೇಕಾದ ಎಚ್ಚರಿಕೆಗಳು. ಈ ದಿವ್ಯವನ್ನು ನಡೆಹಿಸುವ ನ್ಯಾಯಾದಿಪತಿ ಮತ್ತು ದಿವ್ಯಕ್ಕೆ ಗುರಿಯಾಗಿರುವ ಶೋಧರಿಬ್ಬರೂ ಹಿಂದಿನ ದಿನ ಉಪವಾಸವಿದ್ದು ಮೂರನೆಯ ದಿನ ಪ್ರಾತಃಕಾಲ ಸ್ನಾನ ಮಾಡಿ ದೇವತಾ ಪೂಜೆಯ ನಂತರ ನ್ಯಾಯಾದಿಪತಿಯ ದೈವವ ಆ ವಾಹನೆ ಮಾಡಬೇಕು ಇವೆಲ್ಲವೂ ಬಳಿಕ ದಿವ್ಯ ಪರೀಕ್ಷೆ ನಡೆಯುತ್ತದೆ. ದಿವ್ಯದಲ್ಲಿ ಹಲವು ಬಗೆಗಳಿವೆ ಮುಗಿದ ಅವುಗಳೆಂದರೆ ಅಗ್ನಿ ಪರೀಕ್ಷೆ, ಜಲಪರೀಕ್ಷೆ, ಹಾವಿನ ಪರೀಕ್ಷೆ, ಧರ್ಮ, ವಿಷಪರೀಕ್ಷೆ ಮುಂತಾದವುಗಳು[29]

ಮೇಲ್ಕಂಡ ವಿವಾದವನ್ನು ಬಗೆಹರಿಸಲು ತಪ್ತಮಾಷ ಪದ್ದತಿಯನ್ನು ಅನುಸರಿಸಿದೆ ತಪ್ತಮಾಷ ಎಂದರೆ ಕುದಿಯುವ ತುಪ್ಪದಲ್ಲಿ ಚೆನ್ನಾಗಿ ತೊಳೆದ ಚಿನ್ನದ ಉಂಗುರವನ್ನು ಹಾಕಬೇಕು. ತುಪ್ಪವನ್ನು ಮಂತ್ರವೊಂದರಾದ ಪ್ರಾರ್ಥಿಸಿ ಆ ಉಂಗುರವನ್ನು ತೆಗೆಯಬೇಕು ಅಪರಾದಿಯು ಆ ಸಂದರ್ಭದಲ್ಲಿ ಅವನ ಕೈಸುಟ್ಟು ಹೋದರೆ ಅವನು ಅಪರಾಧಿ, ಸುಟ್ಟ ಚಿಹ್ನೆಗಳಿಲ್ಲದಿದ್ದರೆ ಅವನು ನಿರಪರಾದಿ.

ಕೊಪ್ಪರಿಕೆ ತುಪ್ಪವನ್ನು ಹುಯ್ದು ಮರಳಿಸಿದ ಗುಂಡನ್ನು ತುಪ್ಪಕ್ಕೆ ಹಾಕಿ ಹುಣಸೆ ಕೆಂಡದಲ್ಲಿ ಚೆನ್ನಾಗಿ ಮರಳಿಸಿ(ಹುಣಸೆ ಮರದ ತುಂಡು ಹೆಚ್ಚು ಶಾಖ ಕೊಡುತ್ತದೆ ಎಂಬ ಕಾರಣದಿಂದ) ಅದರಲ್ಲಿ ಈ ಅದ್ದಿ ಗುಂಡನ್ನು ಹೊರತೆಗೆಯುವವನು ಪೂಜೆಯ ಹಕ್ಕನ್ನು ಪಡೆಯುವನು ಎಂದು ಪಿರ್ಯಾದನ್ನು ತೀರ್ಮಾನಿಸಲು ಬಂದ ಪಾಳೇಯಗಾರ ಶಿವಾಜಿ ನಾಯಕ ಮತ್ತು ಅಮಲ್ದಾರ ಯೆಂಕಪ್ಪನಾಯಕರು ತೀರ್ಪು ನೀಡಿದರು. ಇದನ್ನು ಸಾಬೀತುಪಡಿಸಲು ಅಕ್ಕಿ ಒಡೆಯನು ಮುಂದಾದನು ಇದಕ್ಕೆ ಮುಂದೆ ನಿಂತು ಮೂರುಬಾರಿ ಪವಾಡಗೆದ್ದನು ಇದರಿಂದ ಅಕ್ಕಿ ಒಡೆಯನಿಗೆ ಪೂಜೆಯ ಹಕ್ಕು ದೊರೆಯಿತು.

ಜೊತೆಗೆ ದೇವರು ಧರಿಸುವ ಆಭರಣಗಳು ತಾಮ್ರದ ಪೀಠ 2 ತಾಮ್ರದ ಮೇಲು ಬೆಳ್ಳಿ 1 ಹೆಣ್ಣು ದೇವರ ಕಿರೀಟ, ಅಂಗೆ ಪೀತ್ತಾಂಬ್ರದ ಜೇಗಬ್ಬೆಉಡ ಸೆವರು, ದಂಡ ಖೊಲ್ಲು ತಾಮ್ರದ ಬಿಲ್ಲೆ, ಬೆಳ್ಳಿಯ ಪಾಲೀಸು ಮಾಡಿದ ದೇವರ ಹೆಸರು ಬಿಲ್ಲೆ, ದೇವಸ್ಥಾನದ ದುರಸ್ತೆ ಶ್ರವಣ, ಆಗಮವನ್ನು ಸರಿಯಾಗಿ ನಡೆದುಕೊಂಡು ಹೋಗುಬಂತೆ ನೋಡಿಕೊಂಡು ಭಕ್ತರಿಂದ ಬರು ಪಡೆದುಕೊಂಡು ಕಾಣಿಕೆ. ವಂಶಪಾರಂಪರ್ಯವಾಗಿ ಪೂಜಾಕಾರ್ಯವನ್ನು ನಡೆಸಿಕೊಂಡು ಹೋಗಬಹುದು ಇದು ದೇವಸ್ಥಾನ ನ್ಯಾಯಾಲಯದ ತೀರ್ಪು ದೇವಸ್ಥಾನಕ್ಕೂ ಬ್ರಾಹ್ಮಮನಿಗೂ ಯಾವುದೇ ಸಂಬಂಧವಿಲ್ಲ. ಈ ತೀರ್ಪಿಗೆ ಸೂರ್ಯ ಚಂದ್ರೇ ಸಾಕ್ಷಿ, ಭೂದೇವಿ ಆಕಾಶ ಸಾಕ್ಷಿ, ಆರ್ಕಾವತಿ ನದಿ ಸಾಕ್ಷಿ, ಹೊನ್ನಾಹುಣಸೇ ಮರ ಸಾಕ್ಷಿ ಶಾಸನದಲ್ಲಿರುವುದನ್ನು ಉಲ್ಲಂಘಿಸಿ ನಡೆದವರು ಬ್ರಾಹ್ಮಣ ಹತ್ಯೆಯ ಪಾಪಕ್ಕೆ ಅನುಭವಿಸುವ ಶಿಕ್ಷೆಯನ್ನು ಅನುಭವಿಸುವರು ಎಂಬುದು ಶಾಸನದ ಉಲ್ಲೇಖ. ಶಿವಾಜಿ ನಾಯಕ ಮತ್ತು ಅಮಲ್ದಾರ ಯೆಂಕಪ್ಪನಾಯಕರು ರುಜು ಮಾಡಿ ಬರೆಸಿದ ಶಾಸನದ ವಿವರ ಅದೇ ದೇವಸ್ಥಾನದ ಪಕ್ಕವಿದೆ. ಇದು ತಮಿಳು ಶಾಸನವಾಗಿದೆ. ಈ ಶಾಸನ 12ನೇ ಶತಮಾನಕ್ಕೆ ಸೇರಿದ್ದಾಗಿದೆ. ದೇವಾಲಯದ ದೀಪದ ಖರ್ಚಿಗಾಗಿ ಬಿಟ್ಟಂತಹ ಕೊಡುಗೆಯ ವಿಚಾರವನ್ನು ಶಾಸನ ತಿಳಿಸುತ್ತದೆ. ಆದರೆ ವಿವರವಾಗಿಲ್ಲ. (ಹಿಂದೆ ಗಂಧ, ನೈವೇಧ್ಯ ಅದರ ಖರ್ಚಿಗಾಗಿ ಕೊಡುಗೆಯನ್ನು ನೀಡುತ್ತಿದ್ದರು. ಕೆಲವರು ಹರಕೆಯನ್ನು ಹೊತ್ತು ಆ ಕಾರ್ಯವು ಅವರಂತೆ ನಡೆದರೆ ಸಣ್ಣಸಣ್ಣ ದೇವರ ಸೇವೆಯನ್ನು ನಿರ್ವಹಿಸುತ್ತಿದ್ದರು). ಈ ಶಾಸನವು ದೇವಾಲಯದ ದೀಪ ಬೆಳಗಿಸುವ ಎಣ್ಣೆಯ ಖರ್ಚಿಗೆ ತಗುಲುವ ವೆಚ್ಚಕ್ಕಾಗಿ ಬಿಟ್ಟ ದಾನವಾಗಿದೆ. ಈ ವಿವರಗಳನ್ನು ಶಾಸನ ತಿಳಿಸುತ್ತದೆ.

## ಉಪಸಂಹಾರ

ಶಾಸನಗಳ ಅಧ್ಯಾಯನದ ವಿವಿಧ ಮುಖಗಳನ್ನು ಇದುವರೆಗೂ ನೋಡಿದೆವು. ಒಂದೊಂದು ಶಾಸನವು ರಾಜರ ವಂಶಾವಳಿಯ ಅವರ ಭೂವ್ಯಾಪ್ತಿ, ಅಧಿಕಾರ ವ್ಯಾಪ್ತಿ, ರಾಜ್ಯವಾಳಿದ ಕಾಲಾವಧಿ ಅವರ ಬಿರುದಾವಳಿಗಳು ಹಾಗೂ ಅವರು ಅನುಸರಿಸಿಕೊಂಡು ಬಂದ ಧರ್ಮ, ಪ್ರೋತ್ಸಾಹಿಸಿದ ಧರ್ಮ ಜೀರ್ಣೋದ್ಧಾರ ಮಾಡಿದ ದೇವಾಲಯಗಳು ಆ ಕಾಲಾವಧಿಯ ಲಿಪಿ, ಭಾಷೆ ಮಂಡಳೇಶ್ವರರು, ಸಾಮಂತರು, ಅಮಲ್ದಾರರು ಕೆತ್ತಿಸಿದ ಶಾಸನಗಳು ಇವುಗಳ ಅಧ್ಯಾಯನವು ಬೃಹತ್ ಕರ್ನಾಟಕದಲ್ಲಿ ಆಳಿದ ರಾಜವಂಶಾವಳಿ ಅವರ ಸಾಮಾಜಿಕ ಧಾರ್ಮಿಕ ವಿಚಾರಗಳು ಹಾಗೂ ಭೂತೆರಿಗೆಗಳ ಬಗ್ಗೆ ಬಹು ವಿಸ್ತಾರವಾದ ವಿವರಣೆಯನ್ನು ಒದಗಿಸಿಕೊಟ್ಟಿದೆ. ಶಾಸನಗಳ ವಿಸ್ತೃತ ಅಧ್ಯಾಯನದಿಂದ ಕರ್ನಾಟಕ ಇತಿಹಾಸದ ಪರಿಚಯವಾಯಿತು.

ಶಾಸನಗಳಿಂದ ಪಡೆದ ಮಾಹಿತಿಯಿಂದ ತಿಳಿದು ಬಂದಿದ್ದೇನೆಂದರೆ ಹೆಚ್ಚಿನ ಸಂಖ್ಯೆಯಲ್ಲಿ ಶೈವ ದೇವಾಲಯಗಳು ನಿರ್ಮಾಣಗೊಂಡಿದೆ. ಇದರಿಂದ ಜೈನ ಧರ್ಮ ಕ್ಷೀಣತೆ ಶೈವಧರ್ಮದ ವಿಸ್ತೀರ್ಣತೆಯನ್ನು ಕಾಣುತ್ತೇವೆ. ಆದರೆ ಬಹಳಷ್ಟು ಶಾಸನಗಳು ಶೈವ ಧರ್ಮಕ್ಕೆ ನೀಡಿದ ಅಥವಾ ಅವರ ಏಳಿಗೆಗಾಗಿ ನೀಡಿದ ದತ್ತಿಶಾಸನಗಳಾಗಿವೆ. ಹೊಯ್ಸಳರ ಕಾಲಾವಧಿಯಲ್ಲಿ ಮಾತ್ರ ರಾಮಾನುಜರ ಪ್ರಭಾವದಿಂದ ವೈಷ್ಣವ ಧರ್ಮದ ದೇವಾಲಯಗಳಿಗೆ ಹೆಚ್ಚು ದಾನ-ಧರ್ಮ ನೀಡಿದ್ದು ತಿಳಿದು ಬರುತ್ತದೆ. ಇದರೊಂದಿಗೆ ಶಾಸನಗಳ ಅಧ್ಯಾಯನದಿಂದ ದಿವ್ಯ ಪರೀಕ್ಷೆ, ಗರುಡ, ಲೇಖಾವಾಣಿ ಮುಂತಾದ ವಿಚಾರಗಳು ತಿಳಿದುಬಂದವು.

ಭರತ ಖಂಡದಲ್ಲೇ ಹೆಚ್ಚು ಶಾಸನಗಳು ಕಂಡು ಬರುವುದು ಕರ್ನಾಟಕದಲ್ಲಿ ಆದರೆ ವಿಪರ್ಯಾಸವೆಂದರೆ ಶಾಸನಗಳ ಬಗ್ಗೆ ಜನರಲ್ಲಿ ಅನಾಧಾರತೆ ಇದೆ. ಅವುಗಳ ಬಗ್ಗೆ ಮೂಢನಂಬಿಕೆಗಳೇ ಹೆಚ್ಚು. ನನ್ನ ಕ್ಷೇತ್ರ ಕಾರ್ಯದ ಸಮಯದಲ್ಲಿ ಈ ವಿಷಯ ತಿಳಿದು ಬಂದಿದೆ. ಉದಾಹರಣೆಗೆ ಮರಡಿಪುರದಲ್ಲಿ ಶಾಸನಗಳನ್ನು ಸಂರಕ್ಷಿಸುವವರಿಲ್ಲದೆ ಅನಾಥವಾಗಿ ಬಿದ್ದಿದೆ. ಶಾಸನಗಳನ್ನು ಜಗಲಿಯ ಒಳಭಾಗ ಕೆಲವು ಕಡೆ ಹೂತಿದ್ದಾರೆ. ಕೆಲವು ಕಡೆ ಅದನ್ನು ತುಳಿದರೆ ಪಾಪ ಎಂದು ಯಾರೂ ಓಡಾಡದ ಜಾಗಕ್ಕೆ ಸ್ಥಳಾಂತರಿಸಿದ್ದಾರೆ. ಶಾಸನಗಳಿಗೆ ಸುಣ್ಣ ಬಣ್ಣ ಬಳಿದು ಅಕ್ಷರ ಕಾಣದಂತೆ

ಮಾಡಿದ್ದಾರೆ. ಮತ್ತೆ ಕೆಲವು ಕಡೆ ಎಮ್ಮೆ, ಹಸು ಕಟ್ಟುವ ನಿಲುಗಲ್ಲುಗಳಾಗಿವೆ. ಇನ್ನೂ ಕೆಲವು ಕಡೆ ಆ ಅಕ್ಷರಗಳನ್ನು ಓದಬಾರದೆಂದು ಓದಿದರೆ ಕೆಡಕು ಉಂಟಾಗುತ್ತದೆಂಬ ಕಲ್ಪನೆಗಳಿವೆ. ಹೀಗೆ ಇತಿಹಾಸ ರಚನೆಯಲ್ಲಿ ಅಮೂಲ್ಯವಾದ ಶಾಸನಗಳು ಯಾವುದೇ ರಕ್ಷಣೆ ಇಲ್ಲದೆ ಹಾಳಾಗುತ್ತಿದೆ.

ಮಂಡ್ಯ ತಾಲ್ಲೂಕಿನ ಹೆಚ್ಚಿನ ದೇವಾಲಯಗಳು ಮುಜರಾಯಿ ಇಲಾಖೆಯ ವಶದಲ್ಲಿದೆ. ಈ ದೇವಾಲಯಗಳು ದುರಸ್ಥಿಯ ಹೆಸರಿನಲ್ಲಿ ವಾಸ್ತು ಮಾರ್ಪಡಿಸಿ ಮೂಲ ವಾಸ್ತು ಶಿಲ್ಪಗಳಿಗೆ ಹಾಗೂ ಶೈಲಿಗೆ ಧಕ್ಕೆಯಾಗುತ್ತಿದೆ. ದೇವಾಲಯಗಳಲ್ಲಿ ವೈಜ್ಞಾನಿಕವಾಗಿ ಸಂರಕ್ಷಣೆ ಮಾಡಲಾಗುತ್ತಿಲ್ಲ. ಎಲ್ಲಾ ದೇವಾಲಯದ ಗೋಪುರಗಳು ಒಂದೇ ರೀತಿಯಲ್ಲಿ ಈಗ ನಿರ್ಮಾಣವಾಗುತ್ತಿದೆ. ದುದ್ದ ಗ್ರಾಮದಲ್ಲಿ ಮೂಲ ಚೌಡೇಶ್ವರಿ ವಿಗ್ರಹವನ್ನು ತೊಣ್ಣೂರು ಕೆರೆಗೆ ಹಾಕಿ ಹೊಸ ಮೂರ್ತಿಯನ್ನು ಕೆತ್ತಿಸಿದ್ದಾರೆ. ಇದು ದೇವಾಲಯಗಳ ಹಾಗೂ ಅಲ್ಲಿರುವ ಮೂರ್ತಿಗಳಿಗೆ ಒದಗಿರುವ ದುಸ್ಥಿತಿ. ನಮ್ಮ ಜನರು ಕೇವಲ ಪೂಜೆಗಷ್ಟೇ ಮಹತ್ವ ನೀಡಿದ್ದಾರೆಯೇ ವಿನಹಃ ದೇವಾಲಯದ ಸಂರಕ್ಷಣೆ ಕಡೆಗೆ ಗಮನ ಕೊಡದೆದಿರುವುದು ವಿಪರ್ಯಾಸದ ಸಂಗತಿಯಾಗಿದೆ.

1. ಮಂಡ್ಯ ತಾಲ್ಲೂಕಿನಲ್ಲಿರುವ ಪ್ರಾಚೀನ ದೇವಾಲಯಗಳು, ಸ್ಮಾರಕಗಳು, ಶಾಸನಗಳನ್ನು ಸಂರಕ್ಷಣೆಯನ್ನು ಮುಜರಾಯಿ ಇಲಾಖೆಗೆ ಒಪ್ಪಿಸುವ ಬದಲು ಪುರಾತತ್ವ ಇಲಾಖೆಗೆ ವಹಿಸಬೇಕು. ಅವು ಮಾತ್ರ ನಿಜವಾದ ಕಾಳಜಿಯಿಂದ ಹಳೇ ಪ್ರಾಚ್ಯ ವಸ್ತುಗಳನ್ನು ಸಂರಕ್ಷಿಸಬಹುದು.

2. ತಾಲ್ಲೂಕಿನ ಹಲವು ದೇವಾಲಯಗಳಲ್ಲಿ ವಿಗ್ರಹವು ನಿತ್ಯ ಪೂಜೆ ಇಲ್ಲದೆ ಕಳಾಹೀನವಾಗಿ ನಿಂತಿದೆ.

3. ಶಾಸನಗಳ ಬಗ್ಗೆ ಗ್ರಾಮಸ್ಥರಲ್ಲಿ ಮೂಢ ನಂಬಿಕೆ ಹಾಗೂ ಅನಾಧಾರಗಳಿಗೆ ಅದನ್ನು ಹೋಗಲಾಡಿಸಲು ಜನರಲ್ಲಿ ಶಾಸನಗಳ ಬಗ್ಗೆ ಅರಿವನ್ನು ಮೂಡಿಸಬೇಕು.

4. ಶಿಥಿಲಾವಸ್ಥೆಯಲ್ಲಿರುವ ದೇವಾಲಯಗಳನ್ನು ಸಂರಕ್ಷಿಸಬೇಕು. ದೇವಾಲಯಗಳು ಮತ್ತು ಶಾಸನಗಳು ಪಾಳು ಮನೆ, ಗಿಡ, ಗೆಂಟೆ, ಹಾವುಗಳ ಆವಾಸ ಸ್ಥಾನವಾಗಿದೆ. ಅದನ್ನು ಜೀರ್ಣೋದ್ಧಾರ ಮಾಡುವ ಕಾರ್ಯ ಆಗಬೇಕು. ಹಳೆಯ ದೇವಾಲಯಗಳನ್ನು ಅದು ಇದ್ದಂತಹ ಮಾದರಿಯಲ್ಲಿ ದುರಸ್ಥಿ ಮಾಡಬೇಕೇ ಹೊರತು ಆಧುನೀಕ ರೀತಿಯಲ್ಲಿ ಮಾರ್ಪಡಿಸಬಾರದು. ಇದರಿಂದ ದೇವಾಲಯಗಳ ಮಹತ್ವ ಹಾಳಾಗಿ ಹೋಗುತ್ತವೆ.

ಒಟ್ಟಾರೆ ಶಾಸನಗಳ ಅಧ್ಯಾಯನದಿಂದ ಆದರಲ್ಲಿರುವ ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳನ್ನು ತಿಳಿದುಕೊಂಡೆವು. ದೇವಾಲಯಗಳ ನಿರ್ವಹಣೆಯು ಅಷ್ಟೊಂದು ತೃಪ್ತಿಕರವಾಗಿಲ್ಲ. ತೃಪ್ತಿಕರವಾಗಿ ನಿರ್ವಹಣೆ ಮಾಡಿ ಹೆಚ್ಚಿನ ಅನುಕೂಲಗಳು ತಾಲ್ಲೋಕಿನ ದೇವಾಲಯಗಳಿಗೆ ದೊರೆತರೆ ಪ್ರವಾಸೋದ್ಯಮ ಅಭಿವೃದ್ಧಿಯಾಗುತ್ತದೆ.

## ಅಡಿಟಿಪ್ಪಣಿ

1. ಎಪಿಗ್ರಾಫಿಯಾ ಕರ್ನಾಟಕ, ಸಂಪುಟ 7, ಮಂ. 47
2. ಅದೇ, 48
3. ಅದೇ, 46
4. ಅದೇ, 12, ಶಾಸನದ 1 ರಿಂದ 6 ಸಾಲುಗಳು
5. ಅದೇ, 23
6. ಅದೇ, 65, 66
7. ಅದೇ, 39
8. ಅದೇ, 83
9. ಅದೇ, 77
10. ಅದೇ, 85
11. ಅದೇ, 84
12. ಅದೇ, 67
13. ಅದೇ, 68
14. ಅದೇ, 69
15. ಅದೇ, 71
16. ಅದೇ, 72
17. ಅದೇ, 73
18. ಅದೇ, 42
19. ಅದೇ, 44
20. ಅದೇ, 41
21. ಅದೇ, 34
22. ಅದೇ, 56, 58
23. ಅದೇ, 15
24. ಅದೇ, 17
25. ಅದೇ, 29
26. ಅದೇ, 13
27. ಅದೇ, 59, 60, 61, 64
28. ಎ.ಡಿ.ಕುಲಶ್ರಸ್ತ -ಇಂಡಿಯನ್ ಲಿಗಲ್ ಅಂಡ್ ಕಾನ್ಸ್ಟ್ರೋಷನಲ್ ಹಿಸ್ಟರಿ.
29. ಅದೇ.

# ಗ್ರಂಥ ಋಣ ಪಟ್ಟಿ


1. ಅಭಿಶಂಕರ್ : ಮಂಡ್ಯ ಗೆಜೆಟಿಯರ್ : ಬೆಂಗಳೂರು, ಪ್ರ. 1967

2. ತೈಲೂರು ವೆಂಕಟಕೃಷ್ಣ : ಮಂಡ್ಯ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ : ಮಂಡ್ಯ 1992

3. ಕೆ. ಅನಂತರಾಮು : ಸಕ್ಕರೆ ಸೀಮೆ ಮಂಡ್ಯದ ಇತಿಹಾಸ : ಮೈಸೂರು 1982

4. ಪಿ.ಬಿ. ದೇಸಾಯಿ : ಕರ್ನಾಟಕ ಇತಿಹಾಸ ; 1970

5. ಎಚ್. ತಿಪ್ಪೇರುದ್ರಸ್ವಾಮಿ ; ಕರ್ನಾಟಕ ಸಂಸ್ಕೃತಿ ಸಮೀಕ್ಷೆ ; ಮೈಸೂರು, 1980

6. ಸೂರ್ಯನಾಥ್ ಕಾಮತ್ : ಕರ್ನಾಟಕ ಸ್ಟೇಟ್ ಗೆಜೆಟಿಯರ್ ; ಬೆಂಗಳೂರು, 1983-84

7. ಎಂ.ವಿ. ಕೃಷ್ಣರಾವ್ : ಕರ್ನಾಟಕ ಇತಿಹಾಸ ದರ್ಶನ ; ಬೆಂಗಳೂರು, 1979

8. ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಮೈಸೂರು. 1966.

9. ದೇ.ಜವರೇಗೌಡ : ಸುವರ್ಣಮಂಡ್ಯ ; ಮಂಡ್ಯ, 2006.

10. ಪ್ರದೀಪ್ ಕುಮಾರ್ ಹೆಬ್ರಿ: ಸಕ್ಕರೆ ಸೀಮೆಗೆ ಬನ್ನಿ ; ಮಂಡ್ಯ , 2004.

11. ಸಿ.ಪಿ.ಕೆ. ಶಾಸನ ಶಾಸ್ತ್ರ ಪ್ರವೇಶ ; ಮೈಸೂರು, 2001.


## ನಿಯತಕಾಲಿಕೆಗಳು ಮತ್ತು ಶಾಸನಗಳ ಆಧಾರಗಳು :


1. ಎಪಿಗ್ರಾಪಿಯ ಇಂಡಿಯ

2. ಎಪಿಗ್ರಾಪಿಯ ಕರ್ನಾಟಕ, ಸಂಪುಟ 7

3. ಪ್ರಬುದ್ಧ ಕರ್ನಾಟಕ, ಮೈಸೂರು.

4. ಆಂದೋಲನ, ಪ್ರಜಾವಾಣಿ, ವಿಜಯಕರ್ನಾಟಕದ ಸಾಪ್ತಾಹಿಕ



ಶಾಸನಗಳಿರುವ ಸಂಗಪ್ಪನ ಕೊಳ, ಮಂಡ್ಯ



ಪ್ರಾಣ ದೇವಾಲಯದ ಎಡಗೋಡೆಯ ಮೇಲಿರುವ ಶಾಸನ, ಮಂಡ್ಯ



ಗಾಂಧಾಳ್ ಶಾಸನಗಳು ಮತ್ತು ವೀರಗಲ್ಲುಗಳು



ಗಾಂಧಾಳ್ ಬೋರದೇವರು



ರಾಯಶೆಟ್ಟಿಪುರದ ನವೀಕರಿಸಿದ ದೇವಾಲಯ



ರಾಯಶೆಟ್ಟಿಪುರದ ಶಾಸನ



ಸೋಮೇಶ್ವರ ದೇವಾಲಯದ ಗರ್ಭಗೃಹ, ರಾಯಶೆಟ್ಟಿಪುರ




ರಾಯಶೆಟ್ಟಿಪುರದ ನವರಂಗದ ಕಂಬಗಳು



ದುದ್ದದ ನಡುತೆರೆಯ ಲಕ್ಷ್ಮೀನರಸಿಂಹ



ದುದ್ದದ ದೇಶಿಕ್ ಸೌಟು



ಲಕ್ಷ್ಮೀನರಸಿಂಹ ದೇವಾಲಯದ ಸುಖನಾಶಿ, ದುದ್ದ



ಶಾಸನ, ದುದ್ದ



ಪಾಳುಬಿದ್ದ ಸೋಮೇಶ್ವರ ದೇವಾಲಯದ ಗೋಡೆಯ ಮೇಲಿರುವ ಭಿತ್ತಿ, ದುದ್ದ



ಆತ್ಮಾಹುತಿ ಕಲ್ಲು, ದುದ್ದ



ಷೋಮೇಶ್ವರ ದೇವಾಲಯದ ನವರಂಗದಲ್ಲಿರುವ ಭಗ್ನಗೊಂಡ ಮೂರ್ತಿ, ದುದ್ದ



ಕಂಬದಹಳ್ಳಿಯ ಯಕ್ಷಮೂರ್ತಿ



ಚೌಡೇಶ್ವರಿ ದೇವಾಲಯ, ದುದ್ದ



ಚೌಡೇಶ್ವರಿಯ ನೂತನ ವಿಗ್ರಹ, ದುದ್ದ



ಮಲ್ಲೇಶ್ವರ ದೇವಾಲಯದ ಶಿಖರ, ಬಸರಾಳು



ಮಲ್ಲೇಶ್ವರ ದೇವಾಲಯದ ಶಿಖರದ ಮೇಲಿರುವ ಸಳ, ಬಸರಾಳು



ಮಲ್ಲೇಶ್ವರ ದೇವಾಲಯದ ಹೊರಗೋಡೆ, ಬಸರಾಳು



ಮಲ್ಲೇಶ್ವರ ದೇವಾಲಯದ ದ್ವಾರ, ಬಸರಾಳು